# ಶ್ರೀ ಗುರು ಚರಿತ್ರೆ

## ಸಚಿತ್ರ ಕಥೆ (ಗಾಣಗಾಪೂರ ಸಹ)



## ಎರಡು ಶಬ್ದಗಳು

ಶ್ರೀ ದತ್ತಾತ್ರೇಯ ಗುರು ಅವರ ದ್ವಿತೀಯ ಅವತಾರ ಶ್ರೀಮನ್ ನರಸಿಂಹ ಸರಸ್ವತಿ ಮಹಾರಾಜರು ಹೇಳಿರುವ ಶ್ರೀ ಗುರುಚರಿತ್ರ ಇದೊಂದು ಪ್ರಾಸಾದಿಕ ಗ್ರಂಥ. ಲಕ್ಷಾದಿ ಭಕ್ತಾದಿಗಳು ಇವರ ಕೃಪೆ ಮತ್ತು ಆಶೀರ್ವಾದದಿಂದ ತಮಗೆ ಬೇಕಾದ ವರವನ್ನು ಪ್ರಾಪ್ತ ಮಾಡಿಕೊಳ್ಳುತ್ತಾ ಇದ್ದಾರೆ. ಈ ಪುಸ್ತಕವನ್ನು ಈ ವಾಸ್ತವಿಕ ಕಥೆಗಳ ಆಧಾರವಾಗಿಟ್ಟುಕೊಂಡು ಬರೆಯಲಾಗಿದೆ.

Figure Story Writer :- Sadanand Maharaj
Figure Story Guider :- Mallikarjun S. Saravade
Kannada Translation :- Jiveshwar D. Saravade
Telugu Translation :- Shrinivas D.
English Translation :- Jayawant Ghodake
Hindi Translation :- Divakar Dasi

Published by

**D. M. Saravade,**

**Deval Ghangapur - 585 212**

Dist. - Gulbarga (Karnataka)

Ph. : (Shop) 08470 - 274327,

(Resi.) 274403




## ಅಧ್ಯಾಯ 1,2,3

# ಗುರುದರ್ಶನ

ಮಂಗಲ ಚರಣ, ಅದ್ವೈತ ಎಂದರೆ ಶಿವತ್ವ ಮತ್ತು ನಿರ್ಭಯತೆ, ಈ ಸಂಸಾರದೊಳಗೆ ಈ ಸಂದೇಶ ಮಾತ್ರ ಸುಖ ಸಾಗರವನ್ನು ನಿರ್ಮಾಣ ಮಾಡಬಹುದು. ನಾಲ್ಕು ಯುಗಗಳ ವರೆಗೆ ಗುರು ಸೇವೆ ಮಾಡಿದ ದೀಪಕ ಎಂಬ ಶಿಷ್ಯನನ್ನು ಭಗವಾನ ಶ್ರೀ ವಿಷ್ಣು ಪ್ರಸನ್ನರಾದಬಳಿಕ ವರವೇನು ಬೇಕು ಎಂದು ಕೇಳಿದರು. ಹೇ ಪರಮಾತ್ಮ ನನಗೆ ಗುರುವಿನ ನಿಜ ಸ್ವರೂಪದ ದರ್ಶನವನ್ನು ಪರಿಚಯಿಸು ಇದು ನನ್ನ ಇಚ್ಛೆ ಆಗಿದೆ. ಹೀಗೆಂದು ದೀಪದನು ಹೇಳಿದಾಗ ಶ್ರೀ ವಿಷ್ಣು ದೇವನು. ತಥಾಸ್ತು ಎಂದು ಆಶಿರ್ವಾದ ಕೊಟ್ಟರು.



Price Rs. 25/-




## ಅಧ್ಯಾಯ 4

# ದತ್ತಜನ್ಮ

ಮಹಾಸತಿ ಅನುಸಯಾ ಅವರು ಮಹಾ ತಪಸ್ವಿ ಅತ್ರಿಮುನಿಗಳ ಧರ್ಮ ಪತ್ನಿ, ಅನುಸೂಯಾಳ ಆಚಾರ ಅತ್ಯಂತ ಶ್ರೇಷ್ಠವಾಗಿತ್ತು, ಪ್ರತ್ಯಕ್ಷ ಸೂರ್ಯ, ಚಂದ್ರ, ಪೃಥ್ವಿ, ಅಗ್ನಿ ಮತ್ತು ವಾಯುದೇವರು ಕೂಡ ಅವಳನ್ನು ಕಂಡು ಭಯ ಪಡುತ್ತಿದ್ದರೂ. ಇಂಥ ಅನುಸೂಯ ಮಾತೆಯ ಸತ್ವ ಪರೀಕ್ಷೆಯನ್ನು ಮಾಡಲು ಸ್ವತ: ತ್ರೀಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರು ಭಿಕ್ಷುಕರ ರೂಪ ಧರಿಸಿ ಅತ್ರಿ ಋಷಿಯ ಮನೆಗೆ ಬಂದು ಬಿಟ್ಟರು. ಅವಳು ಅವರಿಗೆ ಮನೆಯೊಳಗೆ ಬರ ಮಾಡಿಕೊಂಡಳು. ಬಂದ ಅತಿಥಿಗಳಿಗೆ ಏನುಬೇಕು ಎಂದು ಕೇಳಿದಳು, ಅದಕ್ಕೆ ಅವರು ನೀನು ನಮಗೆ ನಗ್ನ ರೂಪದಲ್ಲಿ ಭೋಜನ ನೀಡಬೇಕು ಎಂದು ಕೇಳಿದರು. ಅದಕ್ಕೆ ಅವಳು ತನ್ನ ಪತಿಯನ್ನು ಕೇಳಿದಳು, ಆಗ ಅತ್ರಿಋಷಿಗಳು ಆ ಮೂವರು ಯಾರೆಂದು ಕಂಡು ಹಿಡಿದರು. ಆಗ ಅತ್ರಿ ಋಷಿಗಳ ಆದೇಶದಂತೆ ಅವಳು ಅವರ ಮೇಲೆ ತೀರ್ಥವನ್ನು ಸಿಂಪಡಿಸಿದಳು, ತಕ್ಷಣ ಮೂವರು ಚಿಕ್ಕ ಮಕ್ಕಳಾಗಿ ಪರಿವರ್ತನೆ ಗೊಂಡರು, ಆಗ ಅವಳು ಅವರನ್ನು ಭೋಜನವನ್ನು ಬಡಿಸಿದಳು. ಅದೇ ಆ ಮೂವರು ಮಕ್ಕಳು ತ್ರೀಮೂರ್ತಿರೂಪ ದತ್ತಾತ್ರೇಯ.




## ಅಧ್ಯಾಯ 5

# ಶ್ರೀ ಪಾದವಲ್ಲಭ ಜನ್ಮ

ಸೀತಾಪೂರವೆಂಬ ಊರಿನಲ್ಲಿ ಅಪಳರಾಜ ಮತ್ತು ಅವನ ಪುತ್ರ ಸುಮತಿ ವಾಸಿಸುತ್ತಿದ್ದರು. ಸುಮತಿಯೂ ಪತಿವ್ರತೆ ಸ್ತ್ರೀಯಾಗಿದ್ದಳು. ಒಂದು ದೀನ ಮಧ್ಯಾನ ಭೋಜನೆ ಸಮಯಕ್ಕಿಂತ ಮುಂಚೆ ಒಬ್ಬ ಶ್ರದ್ದೆಯುಳ್ಳ ಬ್ರಾಹ್ಮಣನು ಅವಳ ಮನೇಗೆ ಭಿಕ್ಷೇ ಬೇಡಲೂ ಬಂದನು, ಅವರೇ ಶ್ರೀ ಗುರು ದತ್ತಾತ್ರೇಯ. ಬಂದ ಅತೀಥಿಯನ್ನು ಬರಿಗೈಲಿ ಕಳಿಸಬಾರದೆಂದು ಪತೀಯ ಆಜ್ಞೆಯಾಗಿತ್ತು, ಬ್ರಾಹ್ಮಣ ಭಿಕ್ಷುಕನಿಗೆ ತಮ್ಮ ಭೋಜನ ಸಮಯಕ್ಕಿಂತ ಮೊದಲೆ ಭಿಕ್ಷೇನಿಡಿ ಶ್ರೀ ಗುರು ದತ್ತಾತ್ರೇಯರನ್ನು ಪ್ರಸನ್ನಗೊಳಿಸಿದರು. ಅದಕ್ಕೆ ಅವರು ಅವಳನ್ನು ಪ್ರಸನ್ನರಾಗಿ ಏನೂ ವರಬೇಕು ಎಂದು ಕೇಳಿದರು. ಅದಕ್ಕೆ ಅವಳು ನನಗೆ ನಿಮ್ಮಂಥ ಮಗುಬೇಕು ಎಂದು ಕೇಳಿಧಳು, ಕೆಲವು ದಿನಗಳ ನಂತರ ಅವಳಿಗೊಂದು ಮಗು ಆಯಿತು. ಅವನೇ ಶ್ರೀ ಗುರುದತ್ತಾತ್ರೇಯ ಅವರ ಮೋದಲನೆಯ ಅವತಾರ. ಈ ರೀತಿ ಅಪಳರಾಜಾ ಮತ್ತು ಸುಮತಿಯ ನಿರ್ಮಳ ಭಕ್ತಿಯನ್ನು ನೊಡಿ ದತ್ತಾತ್ರೇಯವರು ಅವರ ಹೊಟ್ಟೇಯಿಂದ ಹುಟ್ಟಿ ಮುಂದೆ ಅವರೇ ಶ್ರೀಪಾದ ಸ್ವಾಮಿಗಳೆಂದು ಪ್ರಸಿದ್ಧರಾದರು.




## ಅಧ್ಯಾಯ 6

# ಗೋಕರ್ಣ ಮಹಾತ್ಮೆ

ರಾವಣನ ತಾಯಿ ಕೈಕೇಯಿಯು ಶ್ರೀ ಶಂಕರನ ಪರಮಭಕ್ತಳಿದ್ದಳು. ಅವಳು ದಿನನಿತ್ಯವೂ ಶಿವಪೂಜೆಯನ್ನುಮಾಡುತ್ತಿದ್ದಳು. ಒಂದು ದಿನ ಅವಳು ಮಣ್ಣಿನಿಂದ ಶಿವಪೂಜೆಯನ್ನು ಮಾಡುತ್ತಿದ್ದಳು. ಅದನ್ನು ನೋಡಿದ ರಾವಣನು ಮಾತೇ ನಾನು ನಿನಗೆ ಈಶ್ವರನ ಆತ್ಮಲಿಂಗವನ್ನೆ ಕೊಡುತ್ತೇನೆ ನೀನು ಅದನ್ನು ಪೂಜಿಸು, ಎಂದು ನುಡಿದನು. ಅವನು ಶಂಕರನನ್ನು ಕುರಿತು ಉಗ್ರ ತಪಸ್ಸನ್ನು ಮಾಡಿ ಶಂಕರನನ್ನು ಒಲಿಸಿಕೊಂಡು ಆತನಿಂದ ಆತ್ಮಲಿಂಗವನ್ನು ಪಡೆದನು. ದೇವತೆಗಳೆಲ್ಲರೂ ರಾವಣನಂಥ ರಾಕ್ಷಸನು ಆತ್ಮಲಿಂಗವನ್ನು ಪಡೆದರೆ ಅನರ್ಥವಾಗುವದೆಂದು ಗಣಪತಿಯನ್ನು ಆತ್ಮಲಿಂಗವನ್ನು ಮರಳಿ ಪಡೆಯುವದಕ್ಕೆ ಕಳಿಸಿದರು. ಗಣಪತಿಯು ತನ್ನ ಚಾಣಾಕ್ಷತೆಯಿಂದ ಆತ್ಮಲಿಂಗವನ್ನು ರಾವಣನಿಂದ ಕಸಿದುಕೊಂಡು ನೆಲಕ್ಕೆ ಇಟ್ಟುಬಿಟ್ಟನು. ಆದ್ದರಿಂದಲೇ ಈ ಕ್ಷೇತ್ರಕ್ಕೆ ಗೋಕರ್ಣವೆಂದು ಹೆಸರು ಬಂತು.




## ಅಧ್ಯಾಯ 7

# ಚಾಂಡಾಳಿಯ ಉದ್ಧಾರ

ಮಿತ್ರಸಹ ನೆಂಬ ಹೆಸರಿನ ಬೇಟೆಗಾರಅಡವಿಗೆ ಹೋಗಿ ಒಬ್ಬ ರಾಕ್ಷಸನನ್ನು ಸಂಹರಿಸಿದನು. ಆ ರಾಕ್ಷಸನ ತಮ್ಮನು ಸೇಡು ತೀರಿಸಿಕೊಳ್ಳಲು ಆ ರಾಜನ ಹತ್ತಿರ ಮೋಸದಿಂದ ಕೆಲಸಕ್ಕೆ ಬಂದನು. ಶ್ರಾದ್ಧದ ದಿವಸ ಮಾಂಸದ ಅಡಿಗೆ ಮಾಡಿ ವಸಿಷ್ಠ ಋಷಿಗಳಿಗೆ ಆ ರಾಕ್ಷಸನ ತಮ್ಮನು ಬಡಿಸಿದನು. ಆಗ ವಸಿಷ್ಠ ಋಷಿಗಳು ರಾಜನಿಗೆ 12 ವರ್ಷ ರಾಕ್ಷಸನಾಗಲು ಶಾಪ ಕೊಟ್ಟರು. 12 ವರ್ಷದ ನಂತರ ಅವನು ರಾಕ್ಷಸ ಜನ್ಮದಿಂದ ಮುಕ್ತನಾದನು. ಆದರೆ ಅವನಿಗೆ ಸಂತಾನಭಾಗ್ಯ ದೊರೆಯಲಿಲ್ಲ. ಆಗ ಗೌತಮ ಮುನಿಗಳು ಅವನಿಗೆ ಭೇಟಿಯಾಗಿ ಅವನಿಗೆ ಗೋಕರ್ಣ ಕ್ಷೇತ್ರದ ಮಹತ್ಮ್ಯಯನ್ನು ವರ್ಣಿಸಿದರು. ಅವರು ಹೇಳಿದಂತೆ ರಾಜನು ಗೋಕರ್ಣಕ್ಕೆ ಹೋಗಿ ಸುಖಿಯಾದನು. ಗೋಕರ್ಣದ ಮಹಿಮೆ ಅಪಾರ ಇದೆ. ಅದಕ್ಕಾಗಿ ಶ್ರೀಪಾದ ಶ್ರೀವಲ್ಲಭರು ಗೋಕರ್ಣದಲ್ಲಿ ಮೂರುವರ್ಷ ವಾಸವಾಗಿದ್ದರು.




## ಅಧ್ಯಾಯ 8,9

### ಅಜ್ಞಾನ ಹುಡುಗ ಸಜ್ಞಾನ

ಶ್ರೀಪಾದ ಶ್ರೀವಲ್ಲಭ ಸ್ವಾಮಿಯವರು ಅಂಬಿಕಾ ಎಂಬ ಹೆಸರಿನ ಸ್ತ್ರೀಯನ್ನು ಶನಿಪ್ರದೋಶ ವ್ರತವನ್ನು ಮಾಡಲು ಉಪದೇಶಿಸಿದರು ಮತ್ತು ಸ್ಕಂದ ಪುರಾಣದ ಕಥೆಯನ್ನು ಹೇಳೀದರು. ಅವಳ ಶುದ್ಧ ಭಾವವನ್ನು ನೋಡಿ ಅವಳ ಮಗನನ್ನು ಆಶಿರ್ವದಿಸಿ ಅವನ ಅಜ್ಞಾನವನ್ನು ಹೋಗಲಾಡಿಸಿ ಜ್ಞಾನಿಯಾಗಿ ಮಾಡಿದರು. ಶ್ರೀ ಗುರುಗಳು ಕುರವಪೂರದಲ್ಲಿ ಇರುತ್ತಿದ್ದಾಗ ಒಬ್ಬ ರಜಕನು ( ಅಗಸ) ಪ್ರತಿದಿವಸ ಅವರ ಸೇವೆಯನ್ನು ಭಕ್ತಿ-ಭಾವದಿಂದ ಮಾಡುತ್ತಿದ್ದನು. ಒಮ್ಮೆ ಅವನು ನದಿಯಲ್ಲಿ ಬಟ್ಟೆ ಒಗೆಯುತ್ತಿದ್ದಾಗ ಮ್ಲೇಂಛ ರಾಜನು ಅಲ್ಲಿ ಜಲಕ್ರೀಡೆಗಾಗಿ ಬಂದನು. ಅವರ ವೈಭವವನ್ನು ನೋಡಿ, ನನಗೂ ಇಂತಹ ವೈಭವವಿದ್ದರೆ ಎಷ್ಟು ಒಳ್ಳೆಯದು ಎಂದು ಚಿಂತಿಸುತ್ತಾ ಬಂದ ಗುರುಗಳ ಪಾದಕ್ಕೆ ನಮಸ್ಕಾರ ಮಾಡಿದನು. ಸಕಲ ಜ್ಞಾನಿಯಾದ ಗುರುಗಳು ಅವನ ಮನದಿಚ್ಛೆಯನ್ನು ತಿಳಿದು, ಅವನಿಗೆ ರಾಜಭೋಗನ್ನು ಭೋಗಿಸುವ ವರವನ್ನು ಕೊಟ್ಟರು.




## ಅಧ್ಯಾಯ 10

## ಕಳ್ಳರ ಸಂಹಾರ

ವಲ್ಲಭೇಷನೆಂಬ ಬ್ರಾಹ್ಮಣನೊಬ್ಬನು ಶ್ರೀಪಾದ ಶ್ರೀವಲ್ಲಭರ ಪ್ರೀತಿಯ ಭಕ್ತನಿದ್ದನು. ಅವನು ವ್ಯಾಪಾರಿಯಾಗಿದ್ದನು. ಒಮ್ಮೆ ಅವನು ಶ್ರೀಪಾದ ಶ್ರೀವಲ್ಲಭರಿಗೆ ಈ ವರ್ಷ ವ್ಯಾಪಾರದಲ್ಲಿ ಹೆಚ್ಚು ಲಾಭ ಬಂದರೆ ಸಾವಿರ ಬ್ರಾಹ್ಮಣರಿಗೆ ಭೋಜನ ಮಾಡಿಸುವೆ ಎಂದು ಬೇಡಿಕೊಂಡನು. ಆವರ್ಷ ಅವನ ಅಪೇಕ್ಷೆಗಿಂತ ಹತ್ತು ಪಟ್ಟು ಹೆಚ್ಚು ಲಾಭವಾಯಿತು. ಆಗ ಅವನು ಅತ್ಯಂತ ಆನಂದದಿಂದ ತನ್ನ ಹಾರೈಕೆಯನ್ನು ಪೂರ್ಣಗೊಳಿಸುವ ಸಲುವಾಗಿ ಹಣವನ್ನು ತೆಗೆದುಕೊಂಡು ಕುರವಪೂರಕ್ಕೆ ಹೊರಟನು. ಕೆಲವು ಕಳ್ಳರು ಇದನ್ನು ತಿಳಿದು ಅವನ ಜೊತೆಗೆ ತಾವೂ ಶ್ರೀಪಾದ ಶ್ರೀವಲ್ಲಭರ ಭಕ್ತರಿರುವರೆಂದು ಸುಳ್ಳು ಹೇಳಿ ಹೊರಟರು. ಒಂದು ನಿರ್ಜನ ಅರಣ್ಯದಲ್ಲಿ ಅವನನ್ನು ಕೊಂದು ಹಣ ತೆಗೆದುಕೊಂಡು ಓಡಿ ಹೋಗುತ್ತಿದ್ದರು. ಆಗ ಶ್ರೀಪಾದ ಶ್ರೀವಲ್ಲಭರು ಅಲ್ಲಿ ಪ್ರತ್ಯಕ್ಷರಾಗಿ ಆ ಕಳ್ಳರನ್ನು ಸಂಹರಿಸಿದರು. ಇದಲ್ಲದೇ ತಮ್ಮ ವಿಭೂತಿಯಿಂದ ಸತ್ತ ವಲ್ಲಭೇಷನನ್ನು ಬದುಕಿಸಿದರು. ಈ ರೀತಿ ಶ್ರೀಪಾದ ಶ್ರೀವಲ್ಲಭರ ಮಹಿಮೆ ಅಪಾರ ಇದೆ.




## ಅಧ್ಯಾಯ 11

# ನೃಸಿಂಹಸರಸ್ವತಿಯವರ ಜನ್ಮ

ಅಂಬಿಕೆಯು ಮುಂದೆ ಕರಂಜ ನಗರದಲ್ಲಿ ಜನ್ಮ ಹೊಂದಿದಳು. ಕೆಲವು ಸಮಯದ ನಂತರ ಅವಳ ತಂದೆ-ತಾಯಿಗಳು ಮಾಧವನೆಂದು ಯೋಗ್ಯವರನೊಂದಿಗೆ ಅವಳ ಲಗ್ನ ಮಾಡಿದರು. ಕೆಲವು ಸಮಯದ ನಂತರ ಅವಳ ಉದರದಿಂದ ಶ್ರೀಪಾದ ಶ್ರೀವಲ್ಲಭರು ಹುಟ್ಟಿದರು. ಅವರೂ ಹುಟ್ಟಿದ ಕೂಡಲೇ ಓಂಕಾರವನ್ನು ಉಚ್ಚರಿಸಿದರು. ಇದನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟರು ಬಾಲಕನಿಗೆ ನರಹರಿ ಎಂದು ನಾಮಕರಣ ಮಾಡಲಾಯಿತು. ಬಾಲಕನು ತಾನು ಅವತಾರಿ ಪುರುಷನೆಂದು ಆಗಾಗ ತನ್ನ ಲೀಲೆಗಳಿಂದ ತೋರಿಸುತ್ತಿದ್ದನು. ಬಾಲಕನು ಏಳೂ ವರ್ಷದವನಾದರೂ ಮಾತನಾಡಲಿಲ್ಲ. ತಂದೆ-ತಾಯಿಗಳು ಅತ್ಯಂತ ಚಿಂತೆಗೊಳಗಾದರು. ಎಷ್ಟು ಉಪಾಯ ಮಾಡಿದರು ಅವನು ಮಾತನಾಡಲಿಲ್ಲ. ಆಗ ಅವನ ಮುಂಜಿ ಯಾದ ಮೇಲೆ ಮಾತನಾಡುವೆ ಎಂದು ಸಜ್ಞೆ ಮಾಡಿದನು. ಅದರಂತೆ ತಂದೆ ತಾಯಿಗಳು ಆತನ ಮುಂಜಿ ಯನ್ನು ಮಾಡಿದ ಕೂಡಲೆ ನರಹರಿ ನಾಲ್ಕು ವೇದಗಳನ್ನು ಪಠಿಸಿದನು. ಇದನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಯಿತು. ಹುಡುಗನು ವೇದ ಅನ್ನುವದನ್ನು ನೋಡಿ ಎಲ್ಲರೂ ಆಶ್ಚರ್ಯ ಚಕಿತರಾದರು.




## ಅಧ್ಯಾಯ 12

# ಕಾಶಿಪ್ರಯಾಣ

ಮುಂಜಿವೆಯಾದ ನಂತರ ನರಹರಿಯು ತಾನು ತೀರ್ಥಯಾತ್ರೆಗೆ ಹೋಗಿ ತಪಸ್ಸನ್ನು ಆಚರಿಸುತ್ತೇನೆಂದು ಹೇಳಿ ಹೊರಟನು. ಆಗ ತಾಯಿ-ತಂದೆಗೆ ತುಂಬ ದುಃಖವಾಯಿತು. ತಾಯಿಯ ಸಮಾಧಾನಕ್ಕಾಗಿ ನರಹರಿಯು ಒಂದು ವರ್ಷ ಅಲ್ಲಿಯೇ ಇದ್ದನು. ಅಷ್ಟರಲ್ಲಿ ಅವಳು ಅವಳಿ ಮಕ್ಕಳನ್ನು ಹೇತ್ತಳು. ಇದಲ್ಲದೆ ತಂದೆ-ತಾಯಿಗಳಿಗೆ ಮೂಲ ದತ್ತ ಸ್ವರೂಪವನ್ನು ತೋರಿಸಿದನು. ಕೊನೆಗೆ ಅವರ ಅನುಮತಿ ಪಡೆದು ಕಾಶೀ ಕ್ಷೇತ್ರಕ್ಕೆ ಹೋದನು. ಇಷ್ಟು ಚಿಕ್ಕವಯಸ್ಸಿನಲ್ಲಿಯೇ ನರಹರಿಯು ವೇದಾಭ್ಯಾಸದಲ್ಲಿ ಶ್ರೇಷ್ಠನಾಗಿದ್ದನ್ನು ಕಂಡು ಅಲ್ಲಿಯ ಪಂಡಿತರು ಚಕಿತಗೊಂಡರು. ಸನ್ಯಾಸ ಆಶ್ರಮದ ಉದ್ಧಾರದ ಸಲುವಾಗಿ ಅವರೆಲ್ಲರೂ ನರಹರಿಯನ್ನು ಸನ್ಯಾಸ ಆಶ್ರಮ ಸ್ವೀಕರಿಸಲು ಆಗ್ರಹ ಮಾಡಿದರು. ನರಹರಿಯು ಅವರ ಮಾತಿಗೆ ಒಪ್ಪಿದನು. ಶ್ರೀ ಗುರುಗಳಿಗೆ ನರಸಿಂಹ ಸರಸ್ವತಿ ಎಂದು ನಾಮಕರಣ ಮಾಡಿದರು. ಇದರಿಂದ ಅವರ ಮಹಿಮೆ ಅಪಾರವಾಗಿ ಹಬ್ಬಿತು. ಹೀಗೆ ಅವರು ತಮ್ಮ ಲೀಲೆಗಳನ್ನು ಪ್ರಕಟಿಸಿದರು.




## ಅಧ್ಯಾಯ 13

### ಮೃತ್ಯುವಿನಿಂದ ಮುಕ್ತಿ

ಶ್ರೀ ನರಸಿಂಹ ಸರಸ್ವತಿ ಯತಿಗಳು ತೀರ್ಥಯಾತ್ರೆ ಮಾಡುತ್ತಾ ಕರಂದ ನಗರಕ್ಕೆ ಬಂದರು. ಅವರು ತಮ್ಮ ತಂದೆ-ತಾಯಿಗಳಿಗೆ ದರ್ಶನಕೊಟ್ಟರು. ಅನಂತರ ಗೋದಾವರಿ ತೀರಕ್ಕೆ ಹೋದರು. ಶ್ರೀ ನರಸಿಂಹ ಸರಸ್ವತಿ ಯತಿಗಳು ಶಿಷ್ಯರೊಂದಿಗೆ ನದಿಯಲ್ಲಿ ಸ್ನಾನ ಮಾಡುವಾಗ, ಒಬ್ಬ ಬ್ರಾಹ್ಮಣನು ಪ್ರಾಣಾಂತಕ ಹೊಟ್ಟೆಶೂಲಿಯಿಂದ ನರಳುತ್ತಾ ನದಿಯಲ್ಲಿ ಪ್ರಾಣ ತ್ಯಾಗ ಮಾಡಲು ಹೊರಟಿದ್ದನು. ಅವನನ್ನು ನೋಡಿ ಶ್ರೀ ಗುರುಗಳು ಶಿಷ್ಯರಿಂದ ಅವನನ್ನು ಕರೆಯಿಸಿ ಪ್ರಾಣತ್ಯಾಗದ ಕಾರಣ ಕೇಳಿದರೂ. ಅಷ್ಟರಲ್ಲಿ ಸಾಯಂದೇವನೆಂಬ ಒಬ್ಬ ಬ್ರಾಹ್ಮಣ ಅಲ್ಲಿಗೆ ಬಂದನು. ಅವನು ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಗುರುಗಳು ಸಾಯಂದೇವನಿಗೆ ಹೊಟ್ಟೆ ಶೂಲಿಯಿಂದ ನರಳುತ್ತಿರುವ ಬ್ರಾಹ್ಮಣನಿಗೆ ಮನೆಗೆ ಕರೆತಂದು ಯಥೇಚ್ಛ ಭೋಜನ ಹಾಕಲು ಹೇಳಿದರು. ಸಾಯಂದೇವನು ತಾವು ನಮ್ಮ ಮನೆಗೆ ಭಿಕ್ಷೇಗೆ ಬರಬೇಕೆಂದು ವಿನಂತಿಸಿದನು. ಸಾಯಂದೇವನ ವಿನಂತಿಗೆ ಶ್ರೀಗುರುಗಳು ಶಿಷ್ಯರೊಂದಿಗೆ ಹಾಗೂ ಉದರ ವ್ಯಥೆಯ ಬ್ರಾಹ್ಮಣನನ್ನು ಜೊತೆಗೆ ಕರೆದೊಯ್ದು ಸಾಯಂದೇವನ ಮನೆಯಲ್ಲಿ ಭಿಕ್ಷೆ ಸ್ವೀಕರಿಸಿ ಬ್ರಾಹ್ಮಣನ ಹೊಟ್ಟೆಶೂಲಿಯನ್ನು ನಿವಾರಿಸಿದನು.




## ಅಧ್ಯಾಯ 14

# ಸತ್ಯದೇವನ ಆಶಿರ್ವಾದ

ಶ್ರೀ ಗುರುಗಳು ಸಾಯಂದೇವನ ಆದರಾತಿಥ್ಯಕ್ಕೆ ಮೆಚ್ಚಿ ಅವನಿಗೆ ಆಶಿರ್ವಾದ ಮಾಡಿದರು. ಸಾಯಂದೇವನು ಯವನನ ಸೇವೆ ಮಾಡುತ್ತಿರುವುದನ್ನು ಅರಿತು ಅವನಿಗೆ ಯವನ ಸೇವೆ ಮಾಡಬಾರೆಂದು ತಿಳಿಸಿದರು. ಅಷ್ಟರಲ್ಲಿ ಯವನನು ಸಾಯಂದಿಅವನನ್ನು ಕರೆಕಳಿಸಿದರು. ಸಾಯಂದಿಅವನು ಅಂದುತ್ತಾ ಶ್ರೀ ಗುರುಗಳನ್ನು ನೆನೆಯುತ್ತಾ, ಯವನನ ಕಡೆಗೆ ಹೋದನು. ಯವನನಿಗೆ ನಿದ್ರೆ ಬಂದು ಸ್ವಪ್ನದಲ್ಲಿ ಶ್ರೀ ಗುರುಗಳೊಬ್ಬರು ಚೆನ್ನಾಗಿ ಬಡೆಯುತ್ತಿದ್ದರು. ಯವನು ಚೀರುತ್ತಾ ಒಧರುತ್ತಾ ಎಚ್ಚರಾಗಿ ಓಡಿ ಬಂದು ಸಾಯಂದೇವನ ಪಾದಗಳಿಗೆ ತನ್ನು ರಕ್ಷಿಸಬೇಕೆಂದು ಬೇಡಿಕೊಂಡನು. ಆಗ ಸಾಯಂದೇವ ಆಶ್ಚರ್ಯಹೊಂದಿ, ಗುರುಗಳಿಗೆ ನಮಸ್ಕರಿಸಬೇಕೆಂದು ಹೇಳಿದನು. ಯವನಿಂದ ಸಾಯಂದೇವ ಮರ್ಯಾದೆಹೊಂದಿ ಮನೆಗೆ ಮರಳಿ ಬಂದನು. ಗುರುಗಳಿಗೆ ಎಲ್ಲ ಸಂಗತಿಯನ್ನು ಆರುಹಿದನು. ಅವನಿಗೆ ಈ ಸಂಗತಿಯಿಂದ ಗುರುಗಳ ಮೇಲೆ ಅಪಾರ ಭಕ್ತಿ ಉಂಟಾಯಿತು.




## ಅಧ್ಯಾಯ 15

# ತೀರ್ಥಕ್ಷೇತ್ರದ ಮಹಾತ್ಮೆ

ಶ್ರೀ ಗುರುಗಳು ಮತ್ತೊಮ್ಮೆ ದರ್ಶನ ಕೊಡುವುದಾಗಿ ಸಾಯಂದೇವನಿಗೆ ನಿರೋಪವನ್ನು ಕೊಟ್ಟು ಕಳಿಸಿದರು. ಶಿಷ್ಯರಿಗೆಲ್ಲ ನಮ್ಮ ಪ್ರಖ್ಯಾತಿಯು ಎಲ್ಲಕಡೆ ಹಬ್ಬಿ ಅನೇಕ ಜಾತಿಯ ಜನರು ನಾನಾ ಪ್ರಕಾರದ ವಾಸನಾ ಧರಿಸಿ ಬರುವರು. ಕಲಿಯುಗದಲ್ಲಿ ನಾವು ಅವರೆಲ್ಲರ ಇಚ್ಛೆ ಪೂರೈಸುವುದು ದುಸ್ತರ. ನಮ್ಮ ಅಂತರಂಗದ ಭಕ್ತರನ್ನು ಮಾತ್ರ ಉದ್ಧರಿಸುವೆವು. ಈಗ ನೀವು ಅನೇಕ ತೀರ್ಥ ಕ್ಷೇತ್ರಗಳಿಗೆ ಸಂಚರಿಸಿರಿ. ಅವುಗಳ ಮಹತ್ವ ಬಹಳವಿರುತ್ತದೆ. ಹೀಗಾಗಿ ನೀವೆಲ್ಲರು ತೀರ್ಥ ಯಾತ್ರೆಮಾಡಿ ಬನ್ನಿರಿ. ನಾವು ವೈಜನಾಥದಲ್ಲಿ ಗುಪ್ತವಾಗಿರುವೆವು. ನೀವು ಎಲ್ಲ ಯಾತ್ರಾ ಮುಗಿಸಿ ಶ್ರೀಶೈಲಕ್ಕೆ ನಮ್ಮ ದರ್ಶನಕ್ಕೆ ಬನ್ನಿರಿ. ಎಂದು ಅವರನ್ನು ಕಳಿಸಿ ತಾವು ವೈಜನಾಥದಲ್ಲಿ ಒಂದು ವರ್ಷ ಗುಪ್ತವಾಗಿ ವಾಸವಾಗಿದ್ದರು.




## ಅಧ್ಯಾಯ 16

## ಶಿಷ್ಯರ ಪರೀಕ್ಷೆ

ಶ್ರೀ ಗುರುಗಳು ಒಬ್ಬ ಗುರುನಿಂದಕ ಮೂರ್ಖ ಬ್ರಾಹ್ಮಣನಿಗೆ ಗುರುಗಳ ಮಹತ್ವ ಅರಿಯುವುದಕ್ಕಾಗಿ ಗುರುಮಹಿಮೆಯ ಒಂದು ದೃಷ್ಟಾಂತವನ್ನು ಹೇಳಿದರು. ಆ ಕತೆಯಲ್ಲಿ ಧೌಮ್ಯ ಮುನಿಯ ಮೂರು ಜನ ಅರುಣಿ, ಬೈದ, ಉಪಮನ್ಯು ಶಿಷ್ಯರು ಯಾವ ರೀತಿ ಕಷ್ಟದಿಂದ ಶ್ರದ್ಧೆ-ಭಕ್ತಿಯಿಂದ ಗುರುಗಳ ಸೇವೆ ಮಾಡಿ ಗುರುಗಳ ಕೃಪೆಗೆ ಪಾತ್ರರಾಗಿ ಗುರುಗಳಿಂದ ಕ್ಷಣಮಾತ್ರದಲ್ಲಿ ಎಲ್ಲ ವಿದ್ಯೆಗಳನ್ನು ಕಲಿತು ಧನ್ಯರಾದರು. ನೀವು ಈ ರೀತಿ ಅನನ್ಯ ಭಕ್ತಿಯಿಂದ, ಏಕನಿಷ್ಠೆಯಿಂದ ಗುರುಗಳ ಗುಣದೋಷ ಎಣಿಸದೆ ಏಕ ಚಿತ್ತದಿಂದ ಗುರುಸೇವಾ ಮಾಡಿ ಧನ್ಯನಾಗು ಎಂದು ಆ ಗುರುನಿಂದಕ ಬ್ರಾಹ್ಮಣರಿಗೆ ಉಪದೇಶಿಸಿದರು. ಗುರುಭಕ್ತಿ ಇದ್ದರೆ ಏನು ಬೇಕಾದರೂ ಸಾಧಿಸಬಹುದು.




## ಅಧ್ಯಾಯ 17

### ಮತಿಮಂದ ಮಗನಿಗೆ ಆಶಿರ್ವಾದ

ಶ್ರೀ ಗುರುಗಳು ವೈಜನಾಥ ಕ್ಷೇತ್ರದಿಂದ ಹೊರಟು ಔದುಂಬರ ಕ್ಷೇತ್ರಕ್ಕೆ ಬಂದು, ಅಲ್ಲಿ ಅನುಷ್ಠಾನ ಮಾಡುತ್ತಾ ಇದ್ದರು. ಔದಂಬರದಲ್ಲಿ ಕೃಷ್ಣಾನದಿ ಆಚೆಯ ದಂಡೆಗೆ ಭುವನೇಶ್ವರಿ ದೇವಸ್ಥಾನವಿದೆ. ಕರವೀರ ಕ್ಷೇತ್ರದಲ್ಲಿ ಒಬ್ಬ ವೇದ-ಶಾಸ್ತ್ರ ಬ್ರಾಹ್ಮಣನಿದ್ದರು. ಅವನಿಗೆ ಮಂದಮತಿ ಮಗನಿದ್ದನು. ವೇದಶಾಸ್ತ್ರಬ್ರಾಹ್ಮನನು ಮರಣ ಹೊಂದಲು, ಊರು ಜನರೆಲ್ಲ ಮಂದಮತಿ ಬಾಲಕನ ನಿಂದೆ, ಅವಹೇಳನ ಮಾಡಲು ಪ್ರಾರಂಭಿಸಿದರು. ಆ ಬಾಲಕನು ಅಲ್ಲಿಂದ ಹೊರಟು ಔದುಂಬರದ ಆಚೆಯ ದಡಗೆ ಇರುವ ಭುವನೇಶ್ವರಿ ದೇವಸ್ಥಾನಕ್ಕೆ ಬಂದನು. ದೇವಿಯ ಮುಂದೆ ಮೂರು ದಿನ ಉಪವಾಸ ಕುಳಿತನು. ದೇವಿ ದೃಷ್ಟಾಂತವಾಗದಿರಲು ತನ್ನ ನಾಲಿಗೆ ಕೊಯ್ದು ಕೊಂಡನು. ದೇವಿ ಬಾಲಕನ ಆಕ್ರೋಶ ನೋಡಿ ಆಚೆ ದಂಡೆ ಔದುಂಬರ ಕೆಳಗೆ ಇರುವ ಗುರುಗಳಿಗೆ ಮೊರೆ ಹೋಗಲು ಹೇಳಿದಳು. ದೇವಿ ಆಜ್ಞೆಯಂತೆ ಗುರುಗಳ ಬಳಿಗೆ ಬಂದು ಗುರುಗಳಿಗೆ ವಂದಿಸಿದನು. ಶ್ರೀ ಗುರುಗಳು ಅವನನ್ನು ಆಶೀರ್ವದಿಸಿ ಅವನ ನಾಲಿಗೆ ಬರುವಂತೆ ಮಾಡಿ ಅವನನ್ನು ಜ್ಞಾನಿಯನ್ನಾಗಿ ಮಾಡಿದರು.




## ಅಧ್ಯಾಯ 18

# ದಾರದ್ರ್ಯ ದೂರ

ಶ್ರೀ ಗುರುಗಳು ಔದುಂಬರದಿಂದ ನರಸೋಬಾವಾಡಿ ಕ್ಷೇತ್ರಕ್ಕೆ ಬಂದರು. ಅಲ್ಲಿ ಅವರು 12 ವರ್ಷ ವಾಸ ಮಾಡಿದರು. ಕೃಷ್ಣಾನದಿ ದಂಡೆಯ ಆಚೆಗಿರುವ ಅವರವಾಡಕ್ಕೆ ಒಬ್ಬ ಬಡ ಬ್ರಾಹ್ಮಣನ ಮನೆಗೆ ಒಂದು ದಿನ ಭಿಕ್ಷೇಗೆ ಹೋದರು. ಆಗ ಬ್ರಾಹ್ಮಣನು ಮನೆಯಲ್ಲಿ ಇರಲಿಲ್ಲ. ಅವರ ಪತ್ನಿ ಮಾತ್ರ ಇದ್ದಳು. ಅವಳು ಗುರುಗಳನ್ನು ಕರೆದು ಮಣೆ ಹಾಕಿ ಕೂಡ್ರಿಸಿ ಮನೆ ಎದುರಿಗಿರುವ ಅವರೆ ಬಳ್ಳಿಯ ಅವರೆಕಾಯಿ ಪಲ್ಯೆಯನ್ನೇ ಭಕ್ತಿಯಿಂದ ಭಿಕ್ಷೆ ಹಾಕಿದಳು. ಗುರುಗಳು ಆನಂದಿತರಾಗಿ ಅವರೇ ಬಳ್ಳಿಯನ್ನೇ ಕಿತ್ತು ಹೋದರು. ಸ್ವಲ್ಪ ಸಮಯದಲ್ಲಿ ಬ್ರಾಹ್ಮಣ ಬಂದು ಅವರೇ ಬಳ್ಳಿ ಗುರುಗಳು ಕಿತ್ತಿದ್ದು ಗೊತ್ತಾಗಿ, ಅದರ ಬೇರನ್ನು ಅಗೆದು ತೆಗೆಯಲು ಆ ಸ್ಥಳದಲ್ಲಿ ಧನದ ಕುಂಭವು ದೊರೆಯಿತು. ಅದನ್ನು ನೋಡಿ ದಂಪತಿಗಳು ಆನಂದ ಹೊಂದಿ ಗುರುಗಳು ದರ್ಶನ ಮಾಡಿ ಆರತಿ ಮಾಡಿ ಧನಕುಂಭ ದೊರೆತದ್ದು ಹೇಳಿದರು ಹಾಗೂ ಗುರುಗಳಿಂದ ಆಶೀರ್ವಾದ ಪಡದರು.




## ಅಧ್ಯಾಯ 19

### ಔದುಂಬರಪುಳ

ಶ್ರೀ ಗುರುಗಳು ನರಸೋಬಾವಾಡಿಯಲ್ಲಿ ಕೃಷ್ಣಾ ಪಂಚಗಂಗಾ ಸಂಗಮದಲ್ಲಿ ಸ್ನಾನ ಮಾಡಿ ನಿತ್ಯಾನುಷ್ಠಾ ಮಾಡುತ್ತ ಭಕ್ತರ ಉದ್ಧಾರ ಮಾಡುತ್ತಿದ್ದರು. ಆರವತ್ನಾಲ್ಕು ಯೋಗಿನಿಯರು ನಿತ್ಯ ಬಂದು ಗುರುಗಳನ್ನು ಕರೆದುಕೊಂಡು ಹೋಗಿ ಶ್ರೀಗುರುಗಳ ಪೂಜಾ ಮತ್ತು ಭಿಕ್ಷೆ ಮಾಡುತ್ತಿದ್ದರು. ಒಂದು ದಿನ ಗಂಗಾನುಜನೆಂಬ ರೈತ ಹೊಲ ಕಾಯುತ್ತಿದ್ದಾಗ, ನದಿಯೊಳಗೆ ಯೋಗಿನಿಯರೊಂದಿಗೆ ಗುರುಗಳು ಪ್ರವೇಶ ಮಾಡಿದ್ದನ್ನು ನೋಡಿದನು. ಅವರ ಹಿಂದಿನಿಂದ ಹೋಗಿ ಎಲ್ಲ ಚಮತ್ಕಾರವನ್ನು ಕಂಡು ಗುರುಗಳು ದೇವರೇ ಎಂದು ನಮಿಸಿದನು. ಗುರುಗಳು ಅವನಿಗೆ ಸುಖ ಸಂಪತ್ತು ಕೊಟ್ಟು ಇದನ್ನು ಯಾರಿಗೂ ಹೇಳಬಾರದು ಎಂದು ಆಜ್ಞಾಪಿಸಿದರು. ಹೀಗೆ ಗುರುಗಳು ಅವನಿಗೆ ಆಶೀರ್ವದಿಸಿ ಕಳಿಸಿಕೊಟ್ಟರು.




## ಅಧ್ಯಾಯ 20

# ವಿಷಬಾಧೆ ನಷ್ಟ

ಶ್ರೀರೋಳ ಎಂಬ ಒಂದು ಗ್ರಾಮದಲ್ಲಿ ಬ್ರಾಹ್ಮಣ ದಂಪತಿಗಳಿದ್ದರು. ಅವರಿಗೆ ಜನಿಸಿದ ಮಕ್ಕಳು ಬದುಕಿ ಉಳಿಯುತ್ತಿರಲಿಲ್ಲ. ಹೀಗೆ ಅವರಿಗೆ ಸಂತಾನ ಭಾಗ್ಯವು ದೊರೆಯಲಿಲ್ಲ. ಕೊನೆಗೆ ಅವರು ಬೇಸರದಿಂದ ಒಬ್ಬಜ್ಯೋತಿಷಿಯ ಹತ್ತಿರ ಹೋದರು. ಆ ಜ್ಯೋತಿಷಿಯನ್ನು ಕೇಳಲು ಪೂರ್ವಜನ್ಮದಲ್ಲಿ ಬ್ರಾಹ್ಮಣನೊಬ್ಬನ ಋಣ ತೀರಿಸದ್ದರಿಂದ ಅವನು ಪಿಶಾಚಿ ಆಗಿ ಶಿಶುಹತ್ಯಾ ಮಾಡುವುದಾಗಿ ತಿಳಿಸಿದನು. ಶ್ರೀಗುರುಗಳ ಸೇವೆಯಿಂದ ಈ ದೋಷ ಪರಿಹಾರವಾಗುವುದಾಗಿ ಹೇಳಿದನು. ಆದರಂತೆ ಭಕ್ತಿಯಿಂದ ಗುರುಸೇವೆ ಮಾಡಲು ಪ್ರಾರಂಭಿಸಿದರು. ಹೀಗೆ ಗುರುಭಕ್ತಿಯ ಪ್ರಭಾವದಿಂದ ಅವರು ಪುತ್ರನನ್ನು ಪಡೆದರು. ಮೂರನೇಯ ದಿನ ಅವರು ಸಂಭ್ರಮದಿಂದ ಆ ಮಗುವಿನ ಚೌಲಕರ್ಮವನ್ನುಮಾಡಲು ಪ್ರಾರಂಬಿಸಿದರು. ಆದರೆ ಚೌಲಕರ್ಮದ ದಿನ ಆ ಮಗುವು ಮರಣ ಹೊಂದಿತು. ಆಗ ಮಗುವಿನ ತಂದೆತಾಯಿ ಶೋಕಿಸಲು ಪ್ರಾಮಭಿಸಿದರು. ಆಗ ಅಲ್ಲಿಯ ಒಬ್ಬ ಗುರುಗಳು ಬಂದು ಬ್ರಹ್ಮಜ್ಞಾನ ಹೇಳಿದರು. ಆದರಿಂದ ಅವರ ದು:ಖವು ಸ್ವಲ್ಪ ಕಡಿಮೆ ಆಯಿತು.




## ಅಧ್ಯಾಯ 21

# ಮೃತ್ಯುವಾದ ಮಗು ಜೀವಂತ

ಶ್ರೀ ಗುರುಗಳು ಸೇವೆ ಅನನ್ಯ ಭಕ್ತಿಯಿಂದ ಮಾಡಿ ಗುರು ವರಪ್ರಸಾದದಿಂದ ಜನಿಸಿದ ಮಗು ದೀರ್ಘಾಯಕ್ಷಿ ಇರಲು, ಅದು ಮರಣ ಹೊಂದಲು ಸಾಧ್ಯವೇ ? ಎಂದು ಪ್ರಲಾಪಿಸಲು ಪ್ರಾರಂಭಿಸಿದರು. ಆ ಗುರುಗಳು ಅನೇಕ ರೀತಿಯಿಂದ ಅವರಿಗೆ ಉಪದೇಶ ಮಾಡಿದರು. ಆದರೆ ಅವಳು ನಾನು ಈ ಮಗುವಿನ ಶವ-ಸಂಸ್ಕಾರವನ್ನು ಮಾಡಲು ಕೊಡುವದಿಲ್ಲ ಎಂದು ಹಟ ಹಿಡಿದಳು. ಹಾಗೇಯೆ ಅವಳು ನಿದ್ರೆ ಹೊಂದಿದಳು. ಆಗ ಒಂದು ವಿಚಿತ್ರ ಘಟನೆಯು ನಡೆಯಿತು. ಸ್ವಪ್ನದಲ್ಲಿ ಶ್ರೀ ಗುರುಗಳು ಬಂದು ಮಗುವನ್ನು ಬದುಕಿಸಿದಂತಾಯಿತು. ಅವಳು ಎದ್ದು ನೋಡಲು ಮಗುವು ಜೀವಂತವಾಗಿತ್ತು, ಅವರೆಲ್ಲಾ ಆನಂದಿತರಾದರು. ಮುಂಜಾನೆ ಊರ ಜನರು ಮಗುವಿನ ಅಂತ್ಯಸಂಸ್ಕಾರ ಮಾಡಲು ಬಂದಾಗ ಮಗು ಬದುಕಿ ಆಟವಾಡುತ್ತಿರುವ ಕೌತುಕವನ್ನು ನೋಡಿ ಅತ್ಯಾಶ್ಚರ್ಯ ಹೊಂದಿ ಎಲ್ಲರು ಗುರುಗಳ ಮಹಿಮೆಯನ್ನು ಕೊಂಡಾಡಿದರು. ನರಸೋಬಾವಡಿ ಮಹಾತ್ಮೆ ಪ್ರಸಿದ್ಧವಾಯಿತು, ಭಕ್ತರು ಶ್ರೀಗುರುವನ್ನು ಭಜಿಸಲು ಅಲ್ಲಿಗೆ ಬರಹತ್ತಿದರು.




## ಅಧ್ಯಾಯ 22

### ಬರಡೆಮ್ಮೆಯು ಹಾಲು ಕೊಟ್ಟಿತು

ಗಾಣಗಾಪೂರದಲ್ಲಿ ವೇದಶಾಸ್ತ್ರಸಂಪನ್ನ ಬ್ರಾಹ್ಮಣ ನೊಬ್ಬನಿದ್ದನು. ಅವನು ಬಹಳ ಬಡವನಾಗಿದ್ದನು. ಗುರುಗಳಿಗೆ ಬಡವರ ಮೇಲೆ ಅಪಾರ ಪ್ರೇಮವಿತ್ತು, ಒಂದು ದಿವಸ ಅವರ ಅವನ ಮನೆಗೆ ಗುರುಗಳು ಭಿಕ್ಷೆಗೆ ಹೋದರು. ಬ್ರಾಹ್ಮಣನು ಮನೆಯಲ್ಲಿ ಇರಲಿಲ್ಲ, ಪತ್ನಿ ಮಾತ್ರ ಇದ್ದಳೂ. ಅವಳು ಮಣೆ ಹಾಕಿ ಕೂಡಿಸಿ, ಪತಿ ಹೊರಗೆ ಹೋಗಿರುವರು. ಅವರು ತರುವ ಅನ್ನಸಾಮುಗ್ರಿಯಿಂದ ಅಡಿಗೆ ಮಾಡಿ ಬಡಿಸುವೆ ಎಂದಳು. ಆಗ ಶ್ರೀ ಗುರುಗಳು ಹೊರಗೆ ಕಟ್ಟಿರುವ ಎಮ್ಮೆ ಹಾಲು ಬೇಡಿದರು. ಅದು ಬರಡೆಮ್ಮ ಆಗಿದೆ ಎಂದು ಹೇಳಿದಳು. ಶ್ರೀ ಗುರುಗಳು ಅದರ ಹಾಲು ಕರೆಯಲು ಹೇಳಿದರು. ಅವರ ಆಜ್ಞೆಯಂತೆ ಹಾಲು ಕರೆಯಲು ದೊಡ್ಡ ತಂಬಿಗೆ ತುಂಬ ಹಾಲು ಕರೆಯಿತು. ಶ್ರೀ ಗುರುಗಳು ಹಾಲು ಭಿಕ್ಷೆ ಸ್ವೀಕರಿಸಿ, ಆಶೀರ್ವದಿಸಿ ಅವರ ಬಡತನ ಕಳೆದು ಹೊರಟು ಹೋದರು.




## ಅಧ್ಯಾಯ 23

## ಬ್ರಹ್ಮ ರಾಕ್ಷಸನ ಮುಕ್ತಿ

ಶ್ರೀ ಗುರುಗಳ ಆಶೀರ್ವಾದದಿಂದ ಬರಡೆಮ್ಮೆ ಹಾಲು ಕೊಡುವ ಸಂಗತಿ ಊರಲ್ಲಿ ಎಲ್ಲಕಡೆ ಹಬ್ಬಿತು. ಆ ಊರ ಗ್ರಾಮಾಧಿಕಾರಿಗೂ ತಿಳಿಯಿತು. ಅವನು ಗುರುಗಳನ್ನು ಊರಿಗೆ ಕರೆದುಕೊಂಡು ಬರಬೇಕೆಂದು ವಿಚಾರ ಮಾಡಿದರು. ಅವನು ಶ್ರೀ ಗುರುಗಳನ್ನು ವೈಭವದಿಂದ ಊರಲ್ಲಿ ಕರೆ ತರುತ್ತಿದ್ದನು. ಊರ ಹೊರಗೆ ಅಶ್ವತ್ಥವೃಕ್ಷದಲ್ಲಿ ಬ್ರಹ್ಮರಾಕ್ಷಸ ಇತ್ತು, ಅದು ಪಲಕ್ಕಿಯಲ್ಲಿ ಬರುವ ಗುರುಗಳನ್ನು ಕಂಡು ಬಂದು ನಮಸ್ಕರಿಸಿ ತನ್ನನ್ನು ಉದ್ಧರಿಸಬೇಕೆಂದು ಬೇಡಿಕೊಂಡಿತು. ಗುರುಗಳು ಅದನ್ನು ಮುಕ್ತಗೊಳಿಸಿದರು. ಅಲ್ಲಿಯೇ ಮಠ ಕಟ್ಟಿಕೊಂಡು ವಾಸಿಸಹತ್ತಿದರು. ಅದೇ ಗಾಣಗಾಪುರ ಕ್ಷೇತ್ರವಾಯಿತು. ಶ್ರೀ ಗುರುಗಳ ಮಹಿಮೆ ಅಪಾರವಿರುವುದು. ಅದು ಜನಸಾಮಾನ್ಯರಿಗೆ ತಿಳಿಯುವದಿಲ್ಲ.




## ಅಧ್ಯಾಯ 24

# ವಿಶ್ವರೂಪ

ಗಾಣಗಾಪೂರದ ಹತ್ತಿರ ಕುಮಸಿ ಎಂಬ ಸುಂದರವಾದ ಗ್ರಾಮವಿದೆ. ಅಲ್ಲಿ ತ್ರಿವಿಕ್ರಮ ಭಾರತಿ ಎಂಬ ಯತಿಗಳೊಬ್ಬರು ವಾಸವಾಗಿದ್ದರು. ಶ್ರೀ ಗುರುಗಳ ಮಹಿಮೆಯನ್ನು ಕೇಳಿ ಅವರೊಬ್ಬ ಢಾಂಬಿಕ ಸನ್ಯಾಸಿಯೆಂದು ನಿಂದೆ ಮಾಡಹತ್ತಿದರು. ಶ್ರೀ ಗುರುಗಳು ಅದನ್ನು ಅರಿತು ಕುಮಸಿ ಗ್ರಾಮಕ್ಕೆ. ಹೊರಟರು ಇತ್ತ ಕುಮಸಿಯಲ್ಲಿ ತ್ರಿವಿಕ್ರಮ ಭಾರತಿ ಪೂಜೆಗೆ ಕುಳಿತಾಗ ಶ್ರೀ ಗುರುಗಳು ಬರುವ ವಾರ್ತೆ ತಿಳಿದು ಅವರ ದರ್ಶನಕ್ಕೆ ನಡೆದರು. ದೂರದಲ್ಲಿ ವೈಭವದಿಂದ ಬರುತ್ತಿರುವ ಗುರುಗಳು ಅನೇಕ ರೂಪದಲ್ಲಿ ಕಂಡರು. ಅದರಲ್ಲಿ ಗುರುಗಳಾರು? ಗೊತ್ತಾಗಲಿಲ್ಲ. ಗುರುಗಳನ್ನು ಧ್ಯಾನಿಸಲು ಎಲ್ಲ ಗುರುಗಳು ಕಾಣದೆ ಶ್ರೀ ಗುರುಗಳೊಬ್ಬರೇ ವಿಶ್ವರೂಪದಿಂದ ದರ್ಶನ ಕೊಟ್ಟು ಅದನ್ನು ಉದ್ಧರಿಸಿದರು.




## ಅಧ್ಯಾಯ 25,26

### ಜಯಪತ್ರಯಾತ್ರೆ

ಒಂದು ದಿನ ಕುಮಸಿಯಲ್ಲಿ ತ್ರಿವಿಕ್ರಮ ಭಾರಯತಿಗಳು ಶ್ರೀ ಗುರುಗಳ ಧ್ಯಾನ ಮಾಡುತ್ತ ಕುಳಿತಿದ್ದರು. ಆಗ ಇಬ್ಬರು ಮದೋನ್ಮತ ಸನ್ಯಾಸಿಗಳು ಬಂದು ತ್ರಿವಿಕ್ರಮ ಭಾರತಿಗೆ ತಮ್ಮ ಜೊತೆ ವೇದದಲ್ಲಿ ವಾದ ಮಾಡಲು ಕರೆದರು. ತ್ರಿವಿಕ್ರಮ ಯತಿಗಳು ನಾವು ಪಂಡಿತರಲ್ಲ, ತಪಸ್ವಿಗಳು, ನಮ್ಮ ಜೊತೆ ನೀವು ವಾದ ಮಾಡುವುದು ಸರಿಯಲ್ಲ ಎಂದು ಹೇಳಿದರು. ಆದರು ಅವರು ಕೇಳಲಿಲ್ಲ. ಆಗ ತ್ರಿವಿಕ್ರಮಭಾರತಿ ಅವರನ್ನು ಗುರುಗಳ ಹತ್ತಿರ ಗಾಣಗಾಪುರಕ್ಕೆ ಕರೆದು ಕೊಂಡು ಹೊದರು. ಪಂಡಿತರು ತಾವು ಪಲ್ಲಕ್ಕಿಯಲ್ಲಿ ಕುಳಿತು, ಮುಂದೆ ನಡೆದರು, ತ್ರಿವಿಕ್ರಮ ಭಾರತಿಯನನ್ನು ಕಾಲು ನಡಿಗೆಯಿಂದ ನಡೆಯಲು ಹೇಳಿದರು. ಹೀಗೆ ಮಾಡಿದ್ದರಿಂದ ಅವರು ಅಲ್ಪಾಯುಷಿಗಳಾದರು.

ತ್ರಿವಿಕ್ರಮ ಭಾರತಿಯು ಗಾಣಗಾಪುರಕ್ಕೆ ಶ್ರೀ ಗುರುಸಾನಿಧ್ಯಕ್ಕೆ ಬಂದು ತಲುಪಿದರು. ಬಂದ ಸಂಗತಿಯನ್ನು ವಿವರಿಸಿದರು. ಶ್ರೀ ಗುರುಗಳು ಪಂಡಿತರಿಗೆ ಆತ್ಮ ಪ್ರಶಂಸೆ ಒಳ್ಳೆಯದಲ್ಲ ಎಂದು ತಿಳಿಸಿದರು. ಆದಕ್ಕೆ ನೀವು ನಿಮ್ಮ ಹಠವನ್ನು ತ್ಯಜಿಸಿ ಸುಮ್ಮನೆ ಹೋಗಿರಿ ಎಂದರು. ಆದರೆ ಅವರು ಗುರುಗಳ ಮಾತನ್ನು ಧಿಕ್ಕರಿಸಿ, ನಿಮಗೆ ತ್ರಿವಿಕ್ರಮನ ಮೇಲೆ ಅಷ್ಟು ಪ್ರೀತಿಯಿದ್ದರೆ ನೀವೆ ವಾದ ಮಾಡಿರಿ. ಇಲ್ಲವಾದರೆ ಜಯಪತ್ರವನ್ನು ಬರೆದು ಕೊಡಿ ಎಂದು ತಮ್ಮ ನಾಶವನ್ನು ತಾವೇ ತಂದು ಕೊಂಡರು.




## ಅಧ್ಯಾಯ 27

### ವೇದಪಂಡಿತರ ಗರ್ವ ನಾಶ

ಶ್ರೀ ಗುರುಗಳು ಅವರ ಗರ್ವ ನಾಶಮಾಡಲು ದಾರಿಯಲ್ಲಿ ಹೋಗುತ್ತಿರುವ ಒಬ್ಬ ಚಾಂಡಾಲನನ್ನು ಶಿಷ್ಯರಿಂದ ಕರೆಸಿದರು. ಆ ಚಾಂಡಾಲನಿಗೆ ಭಸ್ಮ ಲೇಪಿಸಿಕೊಳ್ಳಲು ಹೇಳಿದರು. ಮತ್ತು ಶಿಷ್ಯರಿಂದು ಏಳು ಗೆರೆಯನ್ನು ಬರೆಸಿದರು. ಚಾಂಡಾಲನಿಗೆ ಒಂದೊಂದು ಗೆರೆಯನ್ನು ದಾಟಲು ಹೇಳಿದರು. ಚಾಂಡಾಲನು ಗುರುಗಳ ಆಜ್ಞೆಯಂತೆ ಏಳು ಗೆರೆ ದಾಟಿದನು. ಆಗ ಅವನು ತನ್ನ ಹಿಂದಿನ ಏಳು ಜನ್ಮದ ಪೂರ್ವ ವೃತ್ತಾಂತ ಅರುಹಿದನು. ಕೊನೆಗೆ ತಾನು ವೇದ ಪಂಡಿತನೆಂದು ತಿಳಿಸಿದನು. ಗುರುಗಳು ಮದೋನ್ಮತ್ತ ಬ್ರಾಹ್ಮಣರೊಂದಿಗೆ ವಾದ ಮಾಡಲು ಹೇಳಿದರು. ಆಗ ಅವನು ನಾಲ್ಕು ವೇದಗಳನ್ನು ಹೇಳ ಹತ್ತಿದನು. ಬ್ರಾಹ್ಮಣರಿಬ್ಬರು ಭಯ-ಭಿತರಾಗಿ ಗುರುಗಳಲ್ಲಿ ಕ್ಷಮೆ ಬೇಡಿದರು. ಗುರುಗಳು ಅವರಿಗೆ ರಾಕ್ಷಸರಾಗಲು ಶಾಪ ಕೊಟ್ಟರು. ಹನ್ನೆರಡು ವರ್ಷ ರಾಕ್ಷಸರಾಗಿ ನಂತರ ಮುಕ್ತಿ ಹೊಂದಿದರು.




## ಅಧ್ಯಾಯ 28

## ವೇದದವನಿಗೆ ಮತ್ತೆ ಕ್ಷುದ್ರ

ಶ್ರೀ ಗುರುಗಳಿಗೆ ಆ ಚಾಂಡಾಲನು ನಾನು ಪೂರ್ವಜನ್ಮದಲ್ಲಿ ಬ್ರಾಹ್ಮಣನಿದ್ದು ಈ ಜನ್ಮದಲ್ಲಿ ಚಾಂಡಾಲನು ಹೇಗೆ ಆದೇನು ? ಎಂದು ಕೇಳಿದನು. ಆಗ ಗುರುಗಲು ತಂದೆ-ತಾಯಿಗಳನ್ನು ಧಿಕ್ಕರಿಸಿದವನು ಚಾಂಡಾಲನಾಗುತ್ತಾನೆ ಎಂದು ಹೇಳಿದರು. ಅಷ್ಟರಲ್ಲಿ ಅವನ ಪುತ್ರ ಪುತ್ರಿಯರು ಅಲ್ಲಿಗೆ ಬಂದರು. ಅವರು ಅವನನ್ನು ಮುಟ್ಟಲು ಹೋದರು. ಆಗ ಅವನು ನಾನು ಬ್ರಾಹ್ಮಣ, ನನ್ನನ್ನು ಮುಟ್ಟಬೇಡಿರಿ ಎಂದನು. ಆಗ ಗುರುಗಳು ಒಬ್ಬಲುಬ್ಬಕನ ಕಡೆಯಿಂದ ಅವನಿಗೆ ಸ್ನಾನ ಮಾಡಿಸಿದನು. ಆ ಮೇಲೆ ಅವನ ಮೈಗೆ ಲೇಪಿಸಿದ ಭಸ್ಮ ತೊಳೆದು ಹೋಗಲು ಅವನು ಮೊದಲಿನಂತೆ ಆಗಿ ಪತ್ನಿ-ಪುತ್ರರನ್ನು ಕೂಡಿಕೊಂಡನು. ನೆರೆದ ಜನರೆಲ್ಲ ಆಶ್ಚರ್ಯಗೊಂಡರು. ಆಗ ಅವನು ಭಸ್ಮ ಮಹಿಮೆಯನ್ನು ತಿಳಿಸಲ ಶ್ರೀ ಗುರುಗಳಲ್ಲಿ ಪ್ರಾರ್ಥಿಸಿದರು.




## ಅಧ್ಯಾಯ 29

### ಭಸ್ಮ ಮಹಾತ್ಮೆ

ಶ್ರೀ ಗುರುಗಳು ತ್ರಿವಿಕ್ರಮ ಭಾರತಿ ಯತಿಗಳಿಗೆ ಭಸ್ಮ ಮಹಾತ್ಮೆ ಹೇಳಿದರು. ಕಲಿಯುಗದಲ್ಲಿ ವಾಮದೇವ ಎಂಬ ಮಹಾಯೋಗಿ ಇದ್ದರು. ಅವರು ಸರ್ವಾಂಗ ಬಸ್ಮ ಲೇಪಿಸಿಕೊಂಡು ಅರಣ್ಯದಲ್ಲಿ ಸಂಚರಿಸುತ್ತಿದ್ದರು. ಒಮ್ಮೆ ಒಂದು ಬ್ರಹ್ಮ ರಾಕ್ಷಸ ಆವರನ್ನು ತಿನ್ನಲು ಬಂದಿತು. ಅವರ ಮೈ ಮೇಲಿನ ವಿಭೂತಿಯು ಬ್ರಹ್ಮ ರಾಕ್ಷಸನಿಗೆ ತಗಲಿತು. ಆ ವಿಭೂತಿಯ ಪ್ರಭಾವದಿಂದ ರಾಕ್ಷಸನ ಪಾಪವೆಲ್ಲ ಬಸ್ಮವಾಗಿ ಇಪ್ಪತ್ತೈದು ಜನ್ಮಗಳ ಸ್ಮರಣೆ ಭಂದಿತು. ಅದು ವಾಮದೇವರಿಗ ಶರಣಾಯಿತು. ವಾಮದೇವರು ಭಸ್ಮ ಮಂತ್ರಿಸಿ ರಾಕ್ಷಸನಿಗೆ ಕೊಟ್ಟರು. ರಾಕ್ಷಸಲು ಸರ್ವಾಂಗಕ್ಕೆ ಭಸ್ಮವನ್ನು ಹಚ್ಚಲು, ರಾಕ್ಷಸನು ದಿವ್ಯ ದೇಹ ಹೊಂದಿದನು. ವಾಮದೇವರಿಗೆ ನಮಸ್ಕರಿಸಿದನು. ದೇವತೆಗಳು ಅವನನ್ನು ವಿಮಾನದಲ್ಲಿ ಕೂಡಿಸಿಕೊಂಡು ಹೋದರು.




## ಅಧ್ಯಾಯ 30,31 ಆತ್ಮಜ್ಞಾನ

ಮಹಾಪೂರದಲ್ಲಿ ಗೋಪಿನಾಥನೆಂಬ ಒಬ್ಬ ಧನಿಕ ಇದ್ದನು. ಅವನ ಮಗ ದತ್ತನೆಂದು ಇದ್ದನು.. ಆ ದತ್ತನು ದೊಡ್ಡವನಾದ ಮೇಲೆ ಗೋಪಿನಾಥನು ಒಬ್ಬ ಸುಶೀಲ ಕನ್ಯೆಯೊಡನೆ ಅವನ ಲಗ್ನವನ್ನು ಮಾಡಿದರು. ದತ್ತನು ತನ್ನ ಹೆಂಡಿಯೊಡನೆ ಸುಖವಾಗಿರಲು ಅವನಿಗೆ ರೋಗ ಉಂಟಾಯಿತು. ಔಷಧೋಪಚಾರ ಮಾಡಿದರು. ಗುಣ ಹೊಂದಲಿಲ್ಲ. ದತ್ತನ ಹೆಂಡತಿಯು ಗಂಡನೂ ರೋಗಿಯಾಗಿದ್ದರೂ. ಅನೇಕ ರೀತಿಯಿಂದ ಗಂಡನ ಸೇವೆಯನ್ನು ಮಾಡುತ್ತಿದ್ದಳು. ಅವನ ತಂದೆ-ತಾಯಿಗಳು ಎಷ್ಟು ಹಣ ಖರ್ಚು ಮಾಡಿದರೂ ಅವನ ವ್ಯಾಧಿಯು ಕಡಿಮೆ ಆಗಲಿಲ್ಲ, ಕೊನೆಗೆ ಅವರು ನಿರಾಶರಾದರು. ಇನ್ನು ಗುರುಗಳ ಅನುಗ್ರಹದಿಂದ ಮಾತ್ರ ಈ ರೋಗವು ಗುಣವಾಗುವುದೆಂದು ಪಂಡಿತರು ಹೇಳಿದರು. ಹೀಗೆ ಪಂಡಿತರ ಮಾತು ಕೇಳಿ, ದತ್ತನ ಪತ್ನಿಯು ದತ್ತನನ್ನು ಕರೆದುಕೊಂಡು ಗಾಣಗಾಪೂರಕ್ಕೆ ಗುರುಗಳಿದ್ದಲ್ಲಿಗೆ ಬಂದಳು.

ಶ್ರೀ ಗುರುಗಳ ದರ್ಶನ ಪಡೆಯಲು ಮಠಕ್ಕೆ ಹೋದಳು. ಅಲ್ಲಿ ಶ್ರೀ ಗುರುಗಳು ಅಷ್ಟ ಪುತ್ರ ಸೌಭಾಗ್ಯವತಿ ಭವ ಎಂದು ಆಶೀರ್ವದಿಸಿದರು. ಕೂಡಿದ ಜನರು ಅವಳ ಪತಿ ಮರಣ ಹೊಂದಿರುವನು ಎಂದರು. ಶ್ರೀ ಗುರುಗಳು ಪ್ರೇತವನ್ನು ಅಲ್ಲಿಗೆ ತರಿಸಿ, ದತ್ತನ ಪ್ರತ್ಯಕ್ಷ ಶ್ರೀ ಗುರುಪಾದ ತೀರ್ಥವನ್ನು ಪ್ರೋಕ್ಷಿಸಿದರು. ಕೂಡಲೇ ಪ್ರೇತದಲ್ಲಿ ಜೀವ ಸಂಚಾರವಾಯಿತು. ಅಲ್ಲಿ ಕೂಡಿದ ಜನರೆಲ್ಲಾ ಶ್ರೀ ಗುರುಗಳ ಜಯಘೋಷ ಮಾಡಿದರು.




## ಅಧ್ಯಾಯ 32

# ಅಷ್ಟಪುತ್ರ ಸೌಭಾಗ್ಯವತಿ

ಯತಿವೇಷ ಧಾರಿಗಳು ಹೇಳಿದಂತೆ ಅವಳು ಶ್ರೀಗುರುಗಳ ದರ್ಶನ ಪಡೆಯಲು ಮಠಕ್ಕೆ ಹೋದಳು. ಅಲ್ಲಿ ಶ್ರೀ ಗುರುಗಳು ಅಷ್ಟಪುತ್ರ ಸೌಭಾಗ್ಯವತಿ ಭವ ಎಂದು ಆಶೀರ್ವಾದಿಸಿದರು. ಕೂಡಿದ ಜನರು ಅವಳ ಪತಿ ಮರಣ ಹೊಂದಿರುವನು ಎಂದರು. ಶ್ರೀ ಗುರುಗಳು ಪ್ರೇತನನ್ನು ಅಲ್ಲಿಗೆ ತರಿಸಿ, ದತ್ತನ ಪ್ರತ್ಯಕ್ಷ ಶ್ರೀ ಗುರುಪಾದ ತೀರ್ಥವನ್ನು ಪ್ರೋಕ್ಷಿಸಿದರು. ಕೂಡಲೇ ಪ್ರೇತದಲ್ಲಿ ಜೀವ ಸಂಚಾರವಾಯಿತು. ಅಲ್ಲಿ ಕೂಡಿದ ಜನರೆಲ್ಲಾ ಶ್ರೀ ಗುರುಗಳ ಜಯಘೋಷ ಮಾಡಿದರು. ಮರುದಿನ ದಂಪತಿಗಳು ಸ್ನಾನ ಮಾಡಿ ಶ್ರೀ ಗುರುಗಳನ್ನು ಭಕ್ತಿಯಿಂದ ಪೂಜಿಸಿದರು. ರುದ್ರಾಕ್ಷಿಯನ್ನು ಕೊರಳು ಮತ್ತು ಕಿವಿಯಲ್ಲಿ ಕಟ್ಟಿದನ್ನು ಕೇಳಿ ರುದ್ರಾಕ್ಷಿಯ ಮಹಿಮೆಯನ್ನು ಹೇಳಲು ಶ್ರೀ ಗುರುಗಳಿಗೆ ಪ್ರಾರ್ಥಿಸಿದರು.




## ಅಧ್ಯಾಯ 33

# ರುದ್ರಾಕ್ಷಿ ಮಹಿಮೆ

ದಂಪತಿಗಳಿಬ್ಬರು ಗುರುಗಳಿಗೆ ನಮಸ್ಕರಿಸಿದರು. ಅವರು ರುದ್ರಾಕ್ಷಿ, ರುದ್ರಾಧ್ಯಾಯ ಮಹಾತ್ಮೆಯನ್ನು ಹೇಳಲು ಶ್ರೀ ಗುರುಗಳಿಗೆ ವಿನಂತಿಸಿದರು. ಆಗ ಗುರುಗಳು ಅವರಿಗೆ ಒಂದು ದೃಷ್ಟಾಂತನ್ನು ಹೇಳಲು ಪ್ರಾಂಭಿಸಿದರು. ಹಿಂದಕ್ಕೆ ಒಬ್ಬ ವೇಶ್ಯೆಯೊಬ್ಬಳು ಇದ್ದಳು. ಅವಳು ಮನರಂಜೆಗಾಗಿ ಮನೆಯಲ್ಲಿ ಮಂಗ ಮತ್ತು ಕೋಳಿಗಳನ್ನು ಸಾಕಿದಳು. ಆವಳು ಆ ಮಂಗ ಮತತ್ತು ಕೋಳಿಗಳಿಗೆ ರುದ್ರಾಕ್ಷಿ ಕಟ್ಟಿದ್ದಳು. ಒಂದು ದಿನ ನಾಟ್ಯ ಮಂಟಪಕ್ಕೆ ಬೆಂಕಿ ಹತ್ತಿ ಅವೆರಡು ಸುಟ್ಟು ಭಸ್ಮವಾದವು. ರುದ್ರಾಕ್ಷಿ ಕಟ್ಟಿಕೊಂಡ ಪುಣ್ಯದಿಂದ ಆ ಮಂಗ ಮತ್ತು ಕೋತಿಗಳು ರಾಜಪುತ್ತ ಹಾಗೂ ಮಂಡಿ ಪುತ್ರರಾಗಿ ಜನಿಸಿದರು. ಹೀಗೆ ರುದ್ರಾಕ್ಷಿಯ ಮಹಿಮೆ ಅಪಾರವಾಗಿದೆ. ರುದ್ರಾಕ್ಷಿ ಧಾರಣ ಮಾಡುವುದರಿಂದ ಎಲ್ಲ ಪಾಪಗಳು ನಾಶವಾಗಿ ಅವರು ಉತ್ತಮ ಕುಲದಲ್ಲಿ ಜನ್ಮ ಹೊಂದುವರು.




## ಅಧ್ಯಾಯ 34

# ರುದ್ರಾಧ್ಯಾಯ ಮಹಿಮೆ

ಒಂದು ದಿನ ಪರಾಶರ ಮುನಿಗಳು ರಾಜನ ಹತ್ತಿರ ಬಂದು, ರಾಜನೇ ನಿನ್ನ ಮಗನ ಆಯುಷ್ಯ ಕೇವಲ 12 ವರ್ಷ ಮಾತ್ರ ಇದೆ. ಅದರಲ್ಲಿ ಇನ್ನು 8 ದಿನ ಮಾತ್ರ ಉಳಿದಿದೆ. ಇದನ್ನು ಕೇಳಿ ರಾಜನು ಅಪಾರ ದುಃಖ ಮಾಡಹತ್ತಿದನು. ರಾಜನು ಋಷಿ-ಮುನಿ ರುದ್ರಾಧ್ಯಾಯದಿಂದ ರುದ್ರಾಭಿಷೇಕ ಮಾಡಿಸಿದನು. ಹೀಗೆ 7 ದಿನಗಳವರೆಗೆ ರುದ್ರಾಭಿಷೇಕ ಮಾಡಿ ಹುಡುಗನಿಗೆ ತೀರ್ಥಪ್ರೋಕ್ಷಣೆ ಮಾಡಿದರು. ಅದರಿಂದ ಆ ರಾಜಪುತ್ರನ ಅಪಮೃತ್ಯು ಪರಿಹಾರವಾಯಿತು. ಕಾರಣ ರುದ್ರಾಕ್ಷಿ, ರುದ್ರಾಧ್ಯಾಯ, ತೀರ್ಥ ಅತ್ಯಂತ ಪ್ರಭಾವವಾಗಿವೆ ಎಂದು ಗುರುಗಳು ದಂಪತಿಗಳಿಗೆ ಹೇಳಿದರು.




## ಅಧ್ಯಾಯ 35,36,37

## ಪತಿಸೇವೆಯ ಮಹತ್ವ

ವರದಾನವನ್ನು ಪಡೆದ ಆ ದಂಪತಿಗಳು ಶ್ರೀ ಗುರುಗಳಿಗೆ ತಮಗೊಂದು ಮಂತ್ರ ಉಪದೇಶ ಮಾಡುವಂತೆ ಹೇಳಿದರು. ಶ್ರೀ ಗುರುಗಳು ಸ್ತ್ರೀಯರಿಗೆ ಮಂತ್ರ ಉಪದೇಶ ಮಾಡಬಾರದು. ಅದರಿಂದ ಮಂತ್ರ ಸಾಮರ್ಥ್ಯ ಹೋಗುವುದು ಎಂದು ಹೇಳಿದರು. ಸ್ತ್ರೀಯರು ಭಕ್ತಿಯಿಂದ ಸೋಮವಾರ ವ್ರತಮಾಡಿದರೆ ಸೌಭಾಗ್ಯ ಪ್ರಾಪ್ತ ಸುಖ ಸಂಪತ್ತು ದೊರೆಯುವುದು ಎಂದು ಹೇಳಿದರು.

ಶ್ರೀ ಗುರುಗಳು ಆ ದಂಪತಿಗಳಿಗೆ ಬ್ರಾಹ್ಮಣರು ಮಾಡಬೇಕಾದ ಆಚಾರಗಳನ್ನು ಈ ರೀತಿ ಹೇಳಿದರು. ಯಾವತ್ತು ಋಷಿಮುನಿ ಬ್ರಾಹ್ಮಣರು ಬ್ರಾಹ್ಮ ಮುಹೂರ್ತದಲ್ಲಿ ಎದ್ದು ಎಲ್ಲ ದೇವದೇವತೆಗಳನ್ನು ಸ್ಮರಿಸಬೇಕು. ಪ್ರಾತ: ಸ್ಮರಣೆ ಮಾಡಬೇಕು. ಸಂಧ್ಯಾವಂದನೆ ಮಾಡಬೇಕು. ಸೂರ್ಯಾರ್ಘ್ಯ ಕೊಡಬೇಕು. ಗಾಯತ್ರಿ ಮಂತ್ರ ಜಪ ಮಾಡಬೇಕು. ವೇದಾಭ್ಯಾಸ ಮಾಡಬೇಕು, ಸದಾಚಾರದಿಂದ ನಡೆಯಬೇಕು. ಅಂದರೆ ಅವರ ಮನೆಯಲ್ಲಿ ಲಕ್ಷ್ಮಿಯು ಅಖಂಡ ವಾಸಿಸುವಳು. ನಾಲ್ಕು ಆಶ್ರಮ ಪರಿಪಾಲಿಸಿ ಮಾಡಬೇಕು. ಹೀಗೆ ಗುರುಗಳು ಅವರಿಗೆ ಹೇಳಿದರು.




## ಅಧ್ಯಾಯ 38

# ಸ್ವಲ್ಪದರಲ್ಲಿ ತೃಪ್ತ

ಭಾಸ್ಕರನೆಂಬ ಬಡ ಬ್ರಾಹ್ಮಣನು ಶ್ರೀ ಗುರುಗಳ ಕೀರ್ತಿಯನ್ನು ಕೇಳಿ ಶ್ರೀ ಗುರುಗಳಿಗೆ ಭಿಕ್ಷೆ ಮಾಡಿಸುವ ಇಚ್ಛೆಯಿಂದ ಗಾಣಗಾಪುರಕ್ಕೆ ಬಂದನು. ಅವನು 4 ಜನರಿಗೆ ಆಗುವಷ್ಟು ಮಾತ್ರ ಅನ್ನ ಸಾಮಗ್ರಿ ತಂದಿದ್ದನು. ಅಲ್ಲಿ ನಿತ್ಯ ಸಮಾರಾಧನೆ ನಡೆದಿತ್ತು, ಅಲ್ಲಿ ಊಟ ಮಾಡಿ ಸಾಮಗ್ರಿ ಇಟ್ಟುಕೊಂಡು ಮಲಗುತ್ತಿದ್ದನು. ಹೀಗೆ 2 ತಿಂಗಳು ಕಳೆದವು. ಒಂದು ದಿನ ಗುರುಗಳು ಅವನನ್ನು ಕರೆದು ಭಿಕ್ಷಾ ಹಾಕಲು ಹೇಳಿದರು. ಅವನು ಅಡಿಗೆ ಮಾಡಿ ಗುರುಗಳನ್ನು ಕರೆದನು. ಗುರುಗಳು ಎಲ್ಲರನ್ನು ಕರೆಯಲು ಹೇಳಿದರು. ಅದರಂತೆ ಎಲ್ಲರನ್ನು ಕರೆದನು. ಅವರೆಲ್ಲ ಬಂದರು. ಗುರುಗಳು ನಾಲ್ಕೆ ಮಂದಿ ಅಡಿಗೆಯನ್ನು ಅಕ್ಷಯ ಮಾಡಿದರು. ಆಗ ನಾಲ್ಕು ಸಾವಿರ ಜನ, ಪ್ರಾಣಿ, ಜಲಚರಗಳೆಲ್ಲರೂ ಉಂಡು ತೃಪ್ತರಾದರು. ಅವನು ಮಾಡಿದ ಅಡಿಗೆ ಹಾಗೆಯೇ ಉಳಿದಿತ್ತು, ಎಲ್ಲರೂ ಆಶ್ಚರ್ಯ ಪಟ್ಟರು.




## ಅಧ್ಯಾಯ 39

### 60 ವರ್ಷದ ಬಂಜೆಗೆ ಪುತ್ರ

ಗಾಣಗಾಪುರದಲ್ಲಿ ಸೋಮನಾಥನೆಂಬ ಶಾಸ್ತ್ರಸಂಪನ್ನ ಬ್ರಾಹ್ಮಣ ಇದ್ದನು. ಅವನ ಪತ್ನಿ ಗಂಗಾದೇವಿ ಅರವತ್ತು ವರ್ಷದವಳಾಗಿದ್ದಳು. ಆದರೆ ಅವಳಿಗೆ ಮಕ್ಕಳಿರಲಿಲ್ಲ. ಆ ಬಂಜೆ ಗಂಗಾದೇವಿ ಶ್ರೀ ಗುರುಗಳ ಸೇವೆಯನ್ನು ನಿತ್ಯ ಶ್ರದ್ಧೆಯಿಂದ ಮಾಡುತ್ತಿದ್ದಳು. ಶ್ರೀ ಗುರುಗಳು ಅವಳ ಭಕ್ತಿಗೆ ಮೆಚ್ಚಿ ಅವಳಿಗೆ ಪುತ್ರ ರಾಗುವಂತೆ ವರಕೊಟ್ಟರು. ಶ್ರೀ ಗುರುಗಳ ಆಶಿರ್ವಾದದಿಂದ ಬಂಜೆ ಸ್ತ್ರೀಯಾದ ಗಂಗಾದೇವಿ ಗರ್ಭಿಣಿಯಾಗಿ ಕನ್ಯಾರತ್ನಕ್ಕೆ ತಾಯಿ ಆದಳು. ಊರ ಜನರೆಲ್ಲ ಅರವನ್ನು ವರ್ಷದ ಸ್ತ್ರೀ ತಾಯಿ ಆದ ವಿಷಯ ಎಲ್ಲರಿಗೂ ಗೊತ್ತಾಗಿ ಗುರುಗಳ ಮಹಿಮೆ ಕೊಂಡಾಡಿದರು. ಶ್ರೀಗುರುವು ಬೇಡಿದನ್ನು ಕೊಡುವ ಕಾಮಧೇನು-ಕಲ್ಪವೃಕ್ಷ. ಆದ್ದರಿಂದ ನೀವೆಲ್ಲರೂ ಶ್ರೀ ಗುರುಗಳನ್ನು ಭಕ್ತಿಯಿಂದ ಭಜಿಸಿ ನಿಮ್ಮ ಮನೋರಥಗಳನ್ನು ಪೂರ್ಣ ಮಾಡಿಕೊಳ್ಳಿರಿ.




## ಕುಷ್ಠರೋಗ (ಅಧ್ಯಾಯ 40) ಮುಕ್ತ

ನರಹರಿ ಎಂಬ ಬ್ರಾಹ್ಮಣ ಶ್ವೇತ ಕುಷ್ಠರೋಗಿಯಾಗಿದ್ದನು. ಗುರುಗಳ ದರ್ಶನಕ್ಕೆ ಬಂದು ಸಕಲ ಸಂಗತಿ ಅರುಹಿದನು. ಗುರುಗಳು ಅವನಿಗೆ ಒಣ ಔದುಂಬರ ಕಟ್ಟಿಗೆ ಕೊಟ್ಟು ಇದಕ್ಕೆ ನಿತ್ಯ ನೀರು ಹಾಕು. ಇದು ಯಾವ ದಿನ ಚಿಗುರೋಡೆಯುವದೋ ಅಂದು ನಿನ್ನ ಕುಷ್ಠ ಹೋಗುವುದು ಎಂದು ಹೇಳಿದರು. ಅದರಂತೆ ಅವನು ಭಕ್ತಿಯಿಂದ, ನೀರು ಹಾಕಿ ಪೂಜೆ ಮಾಡಹತ್ತಿದನು. ಜನರೆಲ್ಲ ಚೇಷ್ಟೆ ಮಾಡಹತ್ತಿದರು. ಜನರ ನಿಂದೆ-ಚೇಷ್ಟೆಗೆ ಮನ ವಿಚಲಿತಗೊಳಿಸದೇ ಅತ್ಯಂತ ಶ್ರದ್ಧೆ ಭಕ್ತಿಯಿಂದ ಒಣಕಟ್ಟಿಗೆ ಸೇವಿಸುತ್ತಿದ್ದನು. ಒಂದು ದಿನ ಗುರುಗಳು ಸಂಗಮಕ್ಕೆ ಹೋದಾಗ ಅವನು ಪಡುತ್ತಿದ್ದ ಕಷ್ಟವನ್ನು ನೋಡದರು. ಗುರುಗಳು ಅವನ ಭಕ್ತಿಗೆ ಮೆಚ್ಚಿ ಕಮಂಡಲೋದಕವನ್ನು ಒಣ ಕಟ್ಟಿಗೆಗೆ ಹಾಕಲು ಅದು ಚಿಗುರಿತು. ಅವನ ಶ್ವೇತ ಕುಷ್ಠ ಮಾಯಾವಾಯಿತು. ಶ್ರೀ ಗುರುಗಳ ಅಪಾರ ಲೀಲೆ, ಮಹಿಮೆ ಅಗಾಧವಾದದ್ದು.




## ಅಧ್ಯಾಯ 41 ಧ್ಯಾನ

ಶ್ರೀ ಗುರು ಗಾಣಗಾಪುರಕ್ಕೆ ಬಂದ ಸುದ್ದಿ ಸಾಯಂದೇವನು ಕೇಳಿ ಅತ್ಯಂತ ಹರ್ಷಿತನಾದನು. ಅವನು ಶ್ರೀಗುರು ದರ್ಶನಕ್ಕೆ ಬಂದು ದಂಡವತ್ ನಮಸ್ಕಾರ ಹಾಕಿದನು. ಶ್ರೀ ಗುರುಪಂಕ್ತಿಯಲ್ಲಿ ಭೋಜನವಾಯಿತು. ಶ್ರೀ ಗುರು ಅವನನ್ನು ಕರೆದುಕೊಂಡು ಸಂಗಮಕ್ಕೆ ಹೋದರು. ಅಲ್ಲಿ ಮಾತನಾಡುತ್ತ ಕುಳಿತರು. ಅಷ್ಟರಲ್ಲಿ ಕತ್ತಲಾಯಿತು. ಮಳೆ-ಗಾಳಿ ಬರಲಾರಂಭಿಸಿತು. ಗುರುಗಳು ಚಳಿಯಿಂದ ನಡುಗಹತ್ತಿದರು. ಅವನಿಗೆ ಬೆಂಕಿ ತರಲು ಗಾಣಗಾಪುರಕ್ಕೆ ಕಳಿಸಿದರು. ಅವನು ಕತ್ತಲಲ್ಲೇ ಓಡುತ್ತ ಹೋಗಿ ಗಾಣಗಾಪುರದಿಂದ ಬೆಂಕಿ ತೆಗೆದುಕೊಂಡು ಬರುವಾಗ ಎಡ-ಬಲ ಬದಿ ದೊಡ್ಡ ಹಾವುಗಳನ್ನು ಕಂಡು ಅಂಜಿದನು. ಗುರುಗಳನ್ನು ನೆನೆಯುತ್ತ ಓಡೋಡಿ ಬಂದನು. ದೂರಿನಿಂದ ಗುರುಗಳು ದಿವ್ಯ ಪ್ರಕಾಶ ಮಾನವಾದ ಬೆಳಕಿನಲ್ಲಿ ಕುಳಿತಿದ್ದು ಕಂಡಿತು. ಸನಿಹ ಬಂದಾಗ ಏನು ಕಾಣಲಿಲ್ಲ. ಆಶ್ಚರ್ಯ ಕಂಡು ಬೆರಗಾದನು. ಗುರುಗಳು ನಮ್ಮ ಸೇವೆ ಬಹಳ ಕಠಿಣವಿದೆ ಎಂದು ಹೇಳಿದರು.




## ಅಧ್ಯಾಯ 42,43

### ಅನಂತವ್ರತ

ಶ್ರೀ ಗುರು ಸಾಯಂದೇವನಿಗೆ ಅವರಿಗೆ ಗುರುಸೇವಾ ಮಾಡುವದು ಬಹಳ ಕಠಿಣವಾಗಿರುತ್ತದೆ. ಅಲ್ಲದೆ ಶ್ರೀ ಗುರುಸೇವೆಯನ್ನು ಅತ್ಯಂತ ಭಕ್ತಿಯಿಂದ ಮಾಡುವದರಿಂದ ಅವರ ಇಚ್ಛೆಗಳೆಲ್ಲ ತಕ್ಷಣ ಪೂರ್ಣವಾಗುವವು. ಹೀಗೆ ಶ್ರೀ ಗುರುಗಳು ಹೇಳಿ ಶಿವನು ಪಾರ್ವತಿಗೆ ಏಕಾಂತದಲ್ಲಿ ಕಾಶಿ ಯಾತ್ರಾ ಮಹಾತ್ಮೆಯನ್ನು ಹೇಳಿದರು.

ಶ್ರೀ ಗುರು ಆಜ್ಞೆಯಂತೆ ಸಾಯಂದೇವ ತನ್ನ ಪತ್ನಿ ಪುತ್ರರನ್ನು ಗಾಣಗಾಪುರಕ್ಕೆ ಕರೆ ತಂದು ಶ್ರೀಗುರು ಸಾನಿಧ್ಯದಲ್ಲಿ ಇರಹತ್ತಿದ್ದನು. ಶ್ರೀ ಗುರು ಅನಂತ ಚತುರ್ದಶಿ ಬರಲು ಅನಂತ ವ್ರತದ ಮಹಾತ್ಮೆಯನ್ನು ವಿವರಿಸಿ ಹೇಳಿದರು. ಪೂರ್ವದಲ್ಲಿ ಸುಮಂತನೆಂಬ ಬ್ರಾಹ್ಮಣನಿದ್ದನು. ಅವನಿಗೆ ಸುಶೀಲೆಯೆಂಬ ಹೆಸರಿನ ಕನ್ಯಾ ಇದ್ದಳು ಅವಳ ಲಗ್ನ ಕೌಂಡಿಣ್ಯ ಋಷಿಜೊತೆ ಆಗಿ ಅವಳ ಪತಿಯೊಂದಿಗೆ ಹೊರಟಳು. ಒಂದು ನದಿ ತೀರದಲ್ಲಿ ಅನಂತ ವ್ರತ ಮಾಡುವ ಸ್ತ್ರೀಯರನ್ನು ಕಂಡು ಅವರಿಂದ ಕೇಳಿ ತಾನೂ ಮಾಡಿ ರಾಜೈಶ್ವರ್ಯ ಪಡೆದಳು. ಹೀಗೆ ಶ್ರೀ ಗುರುಗಳು ಸಾಯಂದೇವನಿಗೆ ಅನಂತ ವ್ರತ ಕಥೆ ಮಹಾತ್ಮೆ ಹೇಳಿ ಅವನಿಂದ ಅನಂತ ವ್ರತ ಮಾಡಿಸಿದರು.




## ಅಧ್ಯಾಯ 44,45

## ಶ್ರೀಶೈಲದರ್ಶನ

ಗಾಣಗಾಪುರದಲ್ಲಿನೇಕಾರನು ಶ್ರೀಗುರುಚರಣದಲ್ಲಿ ಅತ್ಯಂತ ಭಕ್ತಿಯಿಂದ ನಿತ್ಯ ಸೇವಾ ಮಾಡುತ್ತಿದ್ದನು. ಆವನ ಬಂಧು-ಬಳಗದವರೆಲ್ಲರೂ ಶಿವರಾತ್ರಿ ಬರಲು ಶ್ರೀಶೈಲಕ್ಕೆ ಹೋದರು. ಆವನನ್ನು ಕರೆದರು. ಆವನು ಗುರು ಸಾನಿಧ್ಯವೇ ಶ್ರೀಶೈಲದ ಶ್ರೀ ಗುರುವೇ ಮಲ್ಲಿಕಾರ್ಜುನನೆಂದನು. ಶಿವರಾತ್ರಿ ದಿನ ಶ್ರೀ ಗುರು ಅವನನ್ನು ಮನೋವೇಗದಿಂದ ಶ್ರೀಶೈಲಕ್ಕೆ ಕರೆದುಕೊಂಡು ಹೋಗಿ ಮಲ್ಲಿಕಾರ್ಜುನನ ದರ್ಶನ ಮಾಡಿಸಿದರು.

ನಂದಿ ಎಂಬ ಬ್ರಾಹ್ಮಣನಿಗೆ ಶ್ವೇತ ಕುಷ್ಠವಾಯಿತು. ಅವನು ತುಳಜಾಪೂರಕ್ಕೆ ಹೋಗಿ ಅಲ್ಲಿ 6 ತಿಂಗಳ ಸೇವಾ ಮಾಡಲು ಅವಳು ಚಂದಲಾ ಪರಮೇಶ್ವರಿ ಗಾಣಗಾಪುರಕ್ಕೆ ಗುರುಗಳ ಸಾನಿಧ್ಯಕ್ಕೆ ಹೋಗಲು ಹೇಳಿದಳು. ದೇವತೆಗಳೇ ಉಪೇಕ್ಷೆ ಮಾಡಿದಾಗ ಮಾನವರಿಂದ ಏನು ? ಎಂದು ಸಂಶಯದ ಮನಸ್ಸಿಂದ ಮಾನವರಾದ ಗುರುಗಳ ಹತ್ತಿರ ಬಂದನು. ಗುರುಗಳು ಅವನ ಮನದಿಂಗಿತ ಅರಿತು ದೇವ ಸನ್ನಿಧಿ ಬಿಟ್ಟು ನರಮನುಷ್ಯರ ಹತ್ತಿರ ಏಕೆ ಬಂದೆ ? ಎಂದರು ಆಗ ಅವನಿಗೆ ಗುರು ಪ್ರತ್ಯಕ್ಷ ಪರಮೇಶ್ವರನೆಂದು ತಿಳಿಯಿತು. ಅವನ ಕುಷ್ಠವು ಮಾಯವಾಯಿತು.




## ಅಧ್ಯಾಯ 46

# ಕಲ್ಲೇಶ್ವರ ದರ್ಶನ

ಹಿಪ್ಪರಗಿಯಲ್ಲಿನ ಭಕ್ತನೊಬ್ಬನು ಗುರುಗಳನ್ನು ಕರೆದುಕೊಂಡು ತನ್ನ ಊರಿಗೆ ಬಂದನು. ಅಲ್ಲಿ ನರಕೇಸರಿ ಎಂಬ ಬ್ರಾಹ್ಮಣ ಕಲ್ಲೇಶ್ವರನ ಪೂಜೆ ಮಾಡುತ್ತ ನಿತ್ಯಹೊಸ ಐದು ಪದ್ಯರಚನೆ ಮಾಡುತ್ತಿದ್ದನು. ಅವನಿಗೆ ಗುರುಗಳ ಕುರಿತು ಪದ್ಯ ರಚನೆ ಮಾಡಲು ಹೇಳಲು, ಅವನು ನಾನು ನರಮನುಷ್ಯರ ಕುರಿತು ಪದ್ಯರಚನೆ ಮಾಡುವುದಿಲ್ಲ, ನನ್ನ ನಾಲಿಗೆ ಕಲ್ಲೇಶ್ವರನ ಪೂಜೆ ಮಾಡಲು ಕಲ್ಲೇಶ್ವರ ಸಾನಿಧ್ಯದಲ್ಲಿ ಗುರುಗಳೇ ಇದ್ದು ಅವರನ್ನು ತಾನು ಪೂಜಾಸ್ತುತಿಗೈಯುತ್ತಿರುವದು ಎಚ್ಚರಾಗಿ ತಿಳಿದು ಓಡುತ್ತಾ ಗುರುಗಳ ಇದ್ದಲ್ಲಿಗೆ ಬಂದು ಗುರುಗಳಿಗೆ ಸಾಷ್ಟಾಂಗ ಮಾಡಿದನು. ಆತನು ಗುರುಗಳ ನಿಷ್ಠಲ ಭಕ್ತನಾಗಿ ಅಸಂಖ್ಯೆ ಪದ-ಪದ್ಯಗಳನ್ನು ರಚಿಸಿದನು. ಅವನು ರಚಿಸಿದ ಪದ್ಯಗಳು ಜನಪ್ರೀಯವಾಗಿವೆ.




## ಅಧ್ಯಾಯ 47

### ಅಷ್ಟರೂಪ

ಶ್ರೀ ಗುರುಗಳು ಗಾಣಗಾಪುರದಲ್ಲಿ ಇರುವಾಗ ಬೇರೆ ಏಳು ಊರಿನಿಂದ ಏಳು ಜನ ಶಿಷ್ಯರು ಬಂದು ದೀಪಾವಳಿಗೆ ಬರಲು ಆಮಂತ್ರಿಸಿದರು. ಗಾಣಗಾಪುರದ ಭಕ್ತರು ತಮ್ಮಲ್ಲಿಯೇ ಇರಲು ಆಗ್ರಹಿಸಿದರು. ಶ್ರೀ ಗುರು ಎಲ್ಲರಿಗೂ ಆಶ್ವಾಸನೆ ಕೊಟ್ಟರು. ಆದರಂತೆ ದಿಪಾವಳಿ ದಿನ ಎಂಟು ರೂಪ ಧರಿಸಿ ಏಳು ಗ್ರಾಮಗಳಿಗೆ ಹೋಗಿ ಏಳು ಭಕ್ತರಿಂದ ಪೂಜೆ ಸ್ವಿಕರಿಸಿದರು. ಗಾಣಗಾಪುರದಲ್ಲಿ ಒಂದು ರೂಪದಿಂದ ಇದ್ದು ಸಮಸ್ತ ಜನರಿಗೆ ದರ್ಶನ ಕೋಟ್ಟು ಎಲ್ಲರಿಂದ ಪೂಜೆ ಸ್ವಿಕರಿಸಿದರು . ಹದಿನೈದು ದಿನಗಳ ತರುವಾಯ ಹುಣ್ಣಿಮೆ ದಿನ ಎಲ್ಲ ಭಕ್ತರು ಗಾಣಗಾಪುರದಲ್ಲಿ ಇದ್ದು ಎಲ್ಲರಿಗೂ ದರ್ಶನ ಕೋಟ್ಟಿದ್ದು ತಿಳಿಯಿತು. ಎಲ್ಲರೂ ಅವರ ಮಹಿಮೆಯನ್ನು ಹೋಗಳಿದರು. ಹೀಗೆ ಶ್ರೀ ಗುರುಗಳ ಮಹಿಮೆಯ ಅಪಾರವಾಗಿದೆ.




## ಅಧ್ಯಾಯ 48

# ಒಕ್ಕಲಿಗನಿಗೆ ವರದಾನ

ಶ್ರೀ ಗುರು ದಿನಾಲು ನಿತ್ಯ ಅನುಷ್ಠಾನಕ್ಕೆ ಸುಗಮಕ್ಕೆ ಹೋಗುತ್ತಿದ್ದಾಗ ದಾರಿಯಲ್ಲಿ ಒಬ್ಬ ಶೂದ್ರನ ಹೋಲದಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಅ ಶೂದ್ರನ ದಿನಾಲು ನಂದು ಅತ್ಯಂತ ಭಕ್ತಿಯಿಂದ ಗೂರುಗಳಿಗೆ ನಮಸ್ಕರಿಸುತ್ತಿದ್ದನು. ಒಂದು ದಿನ ಗುರುಗಳು ನಿನಗೆ ಎನು ಬೇಕು ? ಎಂದು ಕೇಳಿದರು. ಶೂದ್ರ ಹೋಲ ಸಮೃದ್ಧಿ ಅಗಿ ಬೆಳೇಯಬೇಕು ಎಂದನು. ಗುರುಗಳು ಎಲ್ಲ ಬೆಳೆಯನ್ನು ಕೊಯ್ಯಲು ಹೇಳಿದರು. ಆದರಂತೆ ಆವನು ಎಲ್ಲ ಹೊಲವನ್ನು ಕೊಯ್ಯಿಸಿದನು. ಹೆಂಡತಿ, ಮಕ್ಕಳು ಆತ್ತರು. ಆವನು ಯಾರ ಮಾತು ಕೇಳಲಿಲ್ಲ. ಗುರು ವಾಕ್ಯದಂತೆ ನಡೆದನು. ಮುಂದೆ 15 ದಿನ ತರುವಾಯ ಆಕಾಲಿಕ ಮಳೆಯಾಗಿ ಕೊಯ್ದು ಬೆಳೆ ಫಲವತ್ತಾಗಿ ಬೆಳೆಯಿತು. ಉಳಿದವರ ಫಲ ಮಳೆಗೆ ನಾಶವಾಯಿತು. ಹೀಗಿದೆ ಗುರುಗಳ ಮಹಿಮೆ. ಆವರಲ್ಲಿ ದೃಢ ಭಕ್ತಿ ಇರಬೇಕು.




## ಅಧ್ಯಾಯ 49

# ಅಷ್ಟತೀರ್ಥ ಮಹಿಮೆ

ಗಾಣಗಾಪುರದಲ್ಲಿ ಭೀಮಾ - ಅಮರಜಾ ಸಂಗಮ ಸ್ನಾನ ಮಹಾತ್ಮೆಯನ್ನು ಶ್ರೀಗುರುಗಳು ಎಲ್ಲ ಭಕ್ತರಿಗೆ ಹೇಳಿದರು. ಭೀಮಾ ಅಮರಜಾ ನದಿಯಲ್ಲಿ ಷಟ್‌ಕುಲ ತೀರ್ಥ, ನರಸಿಂಹ ತೀರ್ಥ, ಭಾಗೀರಥಿ ತೀರ್ಥ, ಪಾಪ ವಿನಾಶಿನಿ ತೀರ್ಥ, ಕೋಟಿ ತೀರ್ಥ, ರುದ್ರಪಾದ ತೀರ್ಥ, ಚಕ್ರ ತೀರ್ಥ , ಮನ್ಮಥ ತೀರ್ಥ ಹೀಗೆ ಅಷ್ಟತೀರ್ಥಗಳಿವೆ ಎಂದು ಅದರ ಮಗಾತ್ಮೆಯನ್ನು ಹೇಳಿದರು. ಅಷ್ಟರಲ್ಲಿ ಶ್ರೀಗುರುಗಳ ತಂಗಿ ರತ್ನಾಯಿಯು ಕುಷ್ಠ ರೋಗದಿಂದ ಬಳಲುತ್ತಿದ್ದಳು. ಅವಳಿಗೆ ಪಾಪವಿನಾಶಿನಿ ತೀರ್ಥದಲ್ಲಿ ಸ್ನಾನ ಮಾಡಿ ಸೇವಾ ಮಾಡಲು ಹೇಳಿದರು. ಅದರಂತೆ ಅವಳು ಮಾಡಲು ಪಾಪದಿಂದ ಮುಕ್ತಳಾದಳು. ಶ್ರಾವಣ ಮಾಸದಲ್ಲಿ ದೇವರಿಗೆ ಅಭಿಷೇಕ , ಕಾರ್ತಿಕ ಮಾಸದಲ್ಲಿ ದೀಪಾರಾಧನೆ ಮಾಡುವುದರಿಂದ ಅನಂತ ಪುಣ್ಯ ಬರುತ್ತದೆ.



## ಅಧ್ಯಾಯ 50

### ಹಿಂದಿನ ಜನ್ಮದ ಸ್ಮರಣೆ

ಶ್ರೀಪಾದ ಶ್ರೀವಲ್ಲಭರು ಅಗಸನಿಗೆ ರಾಜ್ಯ ಪದವಿ ಅನುಗ್ರಹಿಸಿದನು. (ಈ ಕಥೇಯು ಅಧ್ಯಾಯ 9 ರಲ್ಲಿ ಬಂದಿದೆ) ಆತನು ವೈದುರಾ (ಬಿದರ) ನಗರದಲ್ಲಿ ಮುಸಲ್ಮಾನ ರಾಜನಾದನು. ಅವನಿಗೆ ಹುಣ್ಣೊಂದು ಆಗಲು, ಗುರು ದರ್ಶನದಿಂದ ಗುಣ ಹೊಂದುವಿಯೆಂದು ವಿದ್ವಜರು ಹೇಳಿದರು. ಅಂಥ ಗುರುಗಳು ಎಲ್ಲಿರುವರು ಎಂದು ಕೇಳಿದನು. ಅವರು ಗಾಣಗಾಪುರದಲ್ಲಿ ಇರುವರು ಅವರ ಹತ್ತಿರ ಹೋಗು ಎಂದರು. ಅವರು ಅಲ್ಲಿಗೆ ಹೋಗಿ ಗುರುಗಳ ದರ್ಶನಪಡೇದು, ಹಿಂದಿನ ಜನ್ಮದ ಸ್ಮರಣೆ ಹೊಂದಿ, ಹುಣ್ಣಿನಿಂದ ಗುಣ ಹೊಂದಿದನು. ಗುರುಗಳನ್ನು ತನ್ನ ರಾಜ್ಯಕ್ಕೆ ವೈಭವದಿಂದ ಬರಮಾಡಿಕೊಂಡನು. ಗುರುಗಳನ್ನು ಸತ್ಕರಿಸಿದನು. ಸೇವೆ ಮಾಡಿದನು. ಗುರುಗಳ ಮ್ಲೇಂಛರ ಉಪಟಳ ಇನ್ನು ಹೆಚ್ಚಾಗುವುದು ಎಂದು ಅವತಾರ ಸಮಾಪ್ತ ಮಾಡುವ ನಿರ್ಧಾರ ಹೊಂದಿದರು.




## ಅಧ್ಯಾಯ 51,52

### ಶ್ರೀಶೈಲಕ್ಕೆ ಪ್ರಯಾಣ

ಶ್ರೀ ಗುರುಗಳು ಎಲ್ಲ ಶಿಷ್ಯರನ್ನು ಕರೆದು ನಾವು ಇನ್ನು ಗುಪ್ತವಾಗಿ ಇರುತ್ತೇವೆ. ಈ ಭೂಮಿಯಲ್ಲಿ ಇನ್ನು ಮೇಲೆ ಮುಸಲ್ಮಾನರ ಕಾಟ ಹೆಚ್ಚಾಗುತ್ತಿದೆ. ಮುಸಲ್ಮಾನ ರಾಜನು ನಮ್ಮ ಹತ್ತಿರ ಬಂದು ವರ ಪಡೆದುಕೊಂಡು ಹೋಗಿದ್ದರಿಂದ ಇನ್ನು ಮೇಲೆ ಆ ಜನರು ನಮ್ಮ ಹತ್ತಿರ ಬರುವರು. ಇದರಿಮದ ನಿಮಗೆ ತೊಂದರೆ ಹೆಚ್ಚಾಗುತ್ತದೆ. ಆದ್ದರಿಂದ ಇನ್ನು ಮೇಲೆ ನಾವು ಗುಪ್ತವಾಗಿ ಇರುತ್ತೆವೆ. ಆದಕ್ಕಾಗಿ ಶ್ರೀಶೈಲ ಯಾತ್ರೇಗೆ ಹೋಗಿ ನಿಜಾನಂದದಲ್ಲಿ ಮಗ್ನರಾಗುತ್ತೆವೆ.

ಈ ರೀತಿ ಶ್ರೀ ಗುರುಗಳು ತಮ್ಮ ಅವತಾರವನ್ನು ಸಮಾಪ್ತ ಮಾಡುವ ನಿರ್ಧಾರವನ್ನು ಮಾಡಿದರು. ಅವರು ಪುಷ್ಪಾಸನದ ಮೇಲೆ ಕುಳಿತು ಗುಪ್ತವಾಗಿ ಶ್ರೀ ಶೈಲಕ್ಕೆ ಹೋಗಲು ನಿಶ್ಚಯಿಸಿದ್ದರ. ಉರ ಜನರೆಲ್ಲರೂ ಅಪಾರವಾಗಿ ದು:ಖಿಸ ಪತ್ತಿದರು. ಗುರುಗಳು ಅವರನ್ನೆಲ್ಲಾ ಸಮಾಧಾನ ಪಡಿಸಿದರು. ನಾವು ಆ ದಂಡೆಗೆ ಹೊದ ಮೇಲೆ ಪ್ರಸಾದ ಪುಷ್ಪಗಳು ತೇಲಿ ಬರುವುವು. ನೀವೆಲ್ಲರೂ ಅವನ್ನು ಪ್ರಸಾದವೆಂದು ಸ್ವೀಕರಿಸಿರಿ. ಅವನ್ನು ಪ್ರಸಾದವೆಂದು ಸ್ವೀಕರಿಸಿದರು. ಯಾರು ಗಾಣಗಾಪುರದಲ್ಲಿಯ ನಿರ್ಗುಣ ಪಾದುಕೆಯನ್ನು ಗುಣಗಾನ ಮಾಡುವರೋ ಆವರಿಗೆ ಸಾಕ್ಷಾತ್ ದರ್ಶನ ಲಾಭವಾಗುವುದು. ಅವರ ಮನೆಯಲ್ಲಿ ಕಾಮಧೇನು-ಕಲ್ಪವೃಕ್ಷ ವಾಸವಾಗುವುದು.





## ನಿಗುಣ ಮಠ

ಈ ಪಣ್ಯಕ್ಷೇತ್ರಕ್ಕೆ ಲಕ್ಷಾಧಿ ಭಕ್ತರು ಶ್ರೀಗುರುಗಳ ಪಾದುಕೇಯ ದರ್ಶನವನ್ನು ಪಡೆಯಲು ಆಗಮಿಸುತ್ತಾರೆ. ಬಂದ ಭಕ್ತರು ಭೀಮಾ ಅಮರ್ಜಾ ಸಂಗಮದಲ್ಲಿ ಸ್ನಾನಮಾಡಿ ಪಾವನರಾಗುತ್ತಾರೆ. ಅಷ್ಟತೀರ್ಥದಲ್ಲಿ ಸ್ನಾನವನ್ನು ಮಾಡಿ ಪಾವನರಾಗುತ್ತಾರೆ. ಶ್ರೀಗುರು ಚರಿತ್ರೆ ಪಾರಾಯಣದಿಂದ ಸರ್ವ ಮನೋರಥಗಳು ಪೂರ್ಣವಾಗುವವು. ಆದರಿಂದ ತಾವೆಲ್ಲರೂ ಶ್ರೀಗುರು ಚರಿತ್ರೆಯ ದೊಡ್ಡ ಗ್ರಂಥವನ್ನು ಪಾರಾಯಣ ಮಾಡಿ ನಿಮ್ಮ ಮನೋರಥಗಳನ್ನು ಪೂರ್ಣ ಮಾಡಿ ಕೊಳ್ಳಿರಿ.

ಶ್ರೀ ಗುರುಗಳಿಗೆ ನಮ್ಮ ಕೋಟಿ ಕೋಟಿ ವಂದನೆಗಳು

ದಿಗಂಬರಾ, ದಿಗಂಬರಾ ಶ್ರೀ ಪಾದವಲ್ಲಭ ದಿಗಂಬರಾ.

ಗಾಣಗಾಪೂರದಲ್ಲಿ ಶ್ರೀ ಗುರುಗಳು ಅಂದರೆ ಶ್ರೀ ನರಸಿಂಹ ಸರಸ್ವತಿಯವರು 23 ವರ್ಷ ಅಂದರೆ ಅವರ ಅವತಾರ ಸಮಾಪ್ತಿಯವರೆಗೆ ಗಾಣಗಾಪೂರದಲ್ಲೆ ಇದ್ದರು. ಅವರ ಉದ್ದೇಶವೆನಿತ್ತೆಂದರೆ ಎಲ್ಲ ಭಕ್ತರು ಸನ್ಮಾರ್ಗದಿಂದ ನಡೆಯಬೇಕು, ಭಕ್ತರಲ್ಲಿ ಪರಮಾರ್ಥಿಕ ಜಾಗೃತಿ ನಿರ್ಮಾಣ ಮಾಡಿ ಅದ್ವೈತ ಮಾರ್ಗದಲ್ಲಿ ನಡೆಸುವುದು.

ಈ ಮೇಲಿನ ಉದ್ದೇಶವನ್ನು ಪೂರ್ಣ ಮಾಡಲು ಶ್ರೀ ಗುರುಗಳು ನಿತ್ಯ ಸಂಗಮದಲ್ಲಿ ಪವಿತ್ರ ಸ್ನಾನ ಮಾಡಿ, ಅನುಷ್ಠಾನವನ್ನು ಮಾಡುತ್ತ ಮಧ್ಯಾನದಲ್ಲಿ ಶ್ರೀ ದತ್ತ ಸಂಪ್ರದಾಯವನ್ನು ಅನುಸರಿಸಿ ಅಥವಾ ಸನ್ಯಾಸ ಮಾರ್ಗವನ್ನು ಅನುಸರಿಸಿ ಮಾಧುಕರಿ ಬೇಡುತ್ತ ಇದ್ದರು.

ಬಡವರ ಅಡಚಣೆಯನ್ನು ಕಂಡು ಹಿಡಿದು ಅವರನ್ನು ಶ್ರೀಮಂತರಾಗಿ ಮಾಡುವ ಮಾರ್ಗ ಪ್ರತ್ಯಕ್ಷವಾಗಿ ತೋರಿಸಿದರು. ಯಾರಿಗೆ ರೋಗ ಅಥವಾ ಯಾವುದೆ ತರದ ಬಾಧೆ ಇದ್ದರೆ, ಭಕ್ತರ ಮನೋರಥವನ್ನು ಪೂರ್ಣ ಗೊಳಿಸದೆ ಇರುತ್ತಿರಲಿಲ್ಲ. ಶ್ರೀಗುರುಗಳು ಸಂಗಮಕ್ಕೆ ನಿತ್ಯ ಹೋಗಿ ಬರುತ್ತಿದ್ದರು, ಮಧ್ಯದಲ್ಲಿ ಬಂದು ಹೊಲದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಆ ಹೊಲಿವು ಒಬ್ಬ ಶೂದ್ರನದಾಗಿತ್ತು, ಆದರೆ ಸ್ವಾಮಿಯವರ ಕೃಪೆ ಸದಾ ಅವನ ಮೇಲೆ ಇತ್ತು, ಆ ಹೊಲದಲ್ಲಿ ಮೊದಲು ಸ್ವಲ್ಪ ಬೆಳೆ ಬರುತ್ತಿತ್ತು. ಶ್ರೀ ಗುರುಗಳ ಕೃಪಾಶೀರ್ವಾದದಿಂದ ಆ ಹೊಲದಲ್ಲಿ ಸಮೃದ್ಧ ಬೆಳೆ ಬರುತ್ತಿತ್ತು. ಈ ಸ್ಥಾನವನ್ನು ವಿಶ್ರಾಂತಿ ಕಟ್ಟೆ ಎಂದು ಪ್ರಸಿದ್ಧವಾಗಿದೆ.

ಶ್ರೀ ಗುರುಗಳ ಉಳಿದ ಭಾಗವನ್ನು ಗಾಣಗಾಪೂರದಲ್ಲಿ ಪೂರ್ಣ ಮಾಡಿದರು. ಎನ್ನಲಾಗಿದೆ.

1) ತ್ರಿವಿಕ್ರಮ ಭಾರತಿ : ಇವರು ಕುಮಸಿ ಎಂಬ ಊರಿನಲ್ಲಿ ವಾಸವಾಗಿದ್ದರು. ಇವರು ನರಸಿಂಹ ಸರಸ್ವತಿಯವರ ಉಪಾಸನೆ ಮಾಡುತ್ತಾ ಇದ್ದರು. ಅವನಿಗೆ ಶ್ರೀ ಗುರುಗಳು ವಿಶ್ವರೂಪ ದರ್ಶನವನ್ನು ತೋರಿಸಿದರು.

2) ಮತ್ತು 3) ನರಕೆಸರಿ ಮತ್ತು ನಂದಿನಾಮ : ಈ ಇಬ್ಬರು ಹಿಪ್ಪರಗಿ ಎಂಬ ಊರಿನಲ್ಲಿ ವಾಸವಾಗಿದ್ದರು. ಅಲ್ಲಿ ಕಲ್ಲೇಶ್ವರನ ದೇವಾಲಯವಿದೆ. ಅಲ್ಲಿನ ಅವರು ಉಪಾಸಕರಿದ್ದರು. ನಂದಿ ಎಂಬ ಹೆಸರಿನ ಕುಷ್ಟ ಹೊದಸಲುವಾಗಿ ಮತ್ತು ನರಕೆಸರಿಗೆ ಕನಸಿನಲ್ಲಿ ದಶರನವಾದ ಬಳಿಕ ಅವರು ಒಬ್ಬ ನಿಷ್ಠಾವಂತ ಸೇವಕರಾಗಿದ್ದರು.

4) ಸಾಯಂದೇವ : ಇವರ ವಾಸಸ್ಥಳ ಕಡಗಂಚಿ ಈ ಊರು ಗಾಣಗಾಪೂರದಿಂದ 18 ಮೈಲಿಯ ದೂರದಲ್ಲಿದೆ. ಇದೆ ಊರಲ್ಲಿ ಮೂಳ ಗುರುಚರಿತ್ರವಿದೆ.

5) ನಾಮಧಾರಕ : ಇವರು ಗುರಚರಿತ್ರೆಯ ಲೇಖಕರು ಇವರಿಗೆ ಸಿದ್ಧರು ಗುರುಚರಿತ್ರೆಯನ್ನು ಹೇಳಿದರು. ನಾಮಧಾರಕ ಮತ್ತು ಸಿದ್ಧ ಇವರ ಭೇಟಿಯು 2 ಮೈಲಿಯಲ್ಲಿರುವ ಸಿದನಾಳ ಎಂಬ ಗ್ರಾಮದಲ್ಲಿ ಆಗಿತ್ತು. ಇದಕ್ಕೆ ಸರಸ್ವತಿ ಎಂಬ ಬೇರೆ ಹೆಸರು ಇದೆ.

## ಶ್ರೀ ನರಸಿಂಹ ಸರಸ್ವತಿ ಆರತಿ

ಸ್ವಾಮಿ ನರಸಿಂಹ ಸರಸ್ವತಿಗೆ, ಗುರು ಮೂರ್ತಿಗೆ, ಯತಿವರ್ಯಾಗೆ ಮಂಗಲ। ಕಾಮಿತ ಕಾಮಫಲ ತೃಪ್ತಿಗೆ ಮಂಗಲ॥ಪ॥

ನಿರುಪಮ ನಿತ್ಯ ನಿರು ಪಮಾಯೆಗೆ ಮಂಗಲ, ನಿರ್ವಾಣ ವ್ಯಕ್ತಿ ಯತಿರಾಯಗೇ ಮಂಗಲ॥1॥

ಭಕ್ತ ಜನರ ಕಲ್ಪ ವೃಕ್ಷಾಗೇ ಮಂಗಲ। ಭಕ್ತಿಂದ ಭಜಿಸುವ ಮೋಕ್ಷಾಗೆ ಮಂಗಲ॥2॥

ಭೀಮಾ ಗಂಧರ್ವಪೂರ ವಾಸಗೆ ಮಂಗಲ, ಭೀಮಾದ್ರಿ ಹರಿಹರ ದೇವಾಗೆ ಮಂಗಲ॥3॥

## ಶ್ರೀ ದತ್ತನ ಆರತಿ

ತ್ರಿಗುಣಾತ್ಮಕ ತ್ರೈಮೂರ್ತಿ ದತ್ತಾ ಹಾಜಾಣಾ। ತ್ರಿಗುಣೀ ಅವತಾರಾ ತ್ರೈಲೋಕ್ಯ ಜಾಣ। ನೇತಿ ನೇತಿ ಶಬ್ದನಯೆ ಅನುಮಾನ। ಸುರವರ ಮುನಿಜನಾ ಯೋಗಿ ಸಮಾಧಿನಯೇ ಧ್ಯಾನ॥1॥ ಜಯ ದೇವ ಜಯ ದೇವ ಶ್ರೀ ಗುರುದತ್ತಾ। ಆರತಿ ಓವಾಳತ ಹರಲಿ ಭವಚಿಂತಾ॥ಧೃ॥ ಸಭಾಹ್ಯ ಅಭ್ಯಂತರಿ ತು ಎಕ ದತ್ತಾ। ಅಭಾಗ್ಯಾಸಿ ಕೈಚಿ ನರಳೆ ಹಿ ಮಾತ। ಪರಾಹಿ ಪರತಲಿ ತೀರ್ಥೇ ಕೈಚಾ ಹೇತ। ಜನ್ಮ ಮರಣಾಚ ಪುರಲಾಸೆ ಅಂತ॥2॥ ದತ್ತ ಯೇವುನಿಯಾ ವೂಬಾ ಠಾಕಲಾ। ಸದ್ಭಾವೆ ಸತ್ಯಂಗೆ ಪುಣಿಪಾತ ಕೇಲಾ। ಪ್ರಸನ್ನ ಹೂವೂನಿ ಆಶಿರ್ವಾದ ದಿಧಲಾ। ಜನ್ಮ ಮರಣಾಚಾ ಫೇರಾ ಚುಕವಿಲಾ॥3॥ ದತ್ತ ದತ್ತ ಐಸೆ ಝೂಲಿ ಭೋಳವನ। ಎಕಜನಾರ್ದನ ಶ್ರೀದತ್ತ ಧ್ಯಾನ॥4॥

॥ ಜಯದೇವ ಜಯದೇವ ಜಯ ಶ್ರೀ ಗುರುದತ್ತಾ॥

## Bus Time Table (From Ghangapur Deval)

| Distance Near About ? | K.M. |
|---|---|
| **Solapur** - 09.00, 10.30, 11.00, 12.30, Via Dudhani, Akkalkot | 104 |
| **Pune** - 7.15 Via Akkalkot, Solapur, Temburni | 350 |
| **Pune** - 7.15, 17.00 Via Indi, Mangalwedha, Pandharpur, Jejuri | 325 |
| **Hyderabad** - 6.00 Via Gulberga, Tandur | 230 |
| **Hyderabad** - 10.00 Via Gulberga, Humnabad, Zahirabad | 200 |
| **Satara** - 7.00 Via Dudhani, Solapur, Pandharpur | 220 |
| **Sangali** - 6.30 Via Aalmel, Shindagi, Bijapur, Miraj | 220 |
| **Vasamat** - 6.30 Via Aland, Umarga, Latur, Parabhani | 360 |
| **Aurangabad** - 7.15 Via Tuljapur, Osmanabad, Beed | 300 |
| **Pandharpur** - 7.30, 15.00 Via Mashal, Akkalkot, Solapur | 150 |
| **Vita** - 7.30 Via Bijapur, Jat | 200 |
| **Akkalkot** - 11.45, 13.15, 15.00 Via Dudhani, Maindargi | 74 |
| **Humanabad** - 14.30 Via Gulberga | 80 |
| **Goa Panaji** - 17.45 Via Bijapur, Belgaum | 350 |
| **Ghanagapur Railway Station** - 6.30, 7.30, 10.30, 13.30, 14.00, 15.15, 17.30 | 22 |
| **Gulbarga** - 6.00, 7.00, 8.30, 11.30, 12.30, 13.00, 14.30, 15.15, 17.00, 18.00 | 40 |
| **Jevargi** - 10.45, 2.30, 5.30 Via Bandarwal, Nellogi | 55 |

**We thank State Bank of Hyderabad Deval Ghangapur Branch**

